ವಿಶೇಷ ವಾಙ್ಮಯ ಪ್ರಸಾರ ಪುಸ್ತಕಮಾಲೆ-೨

# ಮಹಾಕವಿ ರನ್ನ

ಹಾಗು

# ಅವನ ಕೃತಿಗಳು

ಆರು ಉಪನ್ಯಾಸಗಳು





ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಮಹಾಕವಿ ರನ್ನ

ಹಾಗು

# ಅವನ ಕೃತಿಗಳು

**ಆರು ಉಪನ್ಯಾಸಗಳು**



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಕಾಶಕರು :
ಶ್ರೀ ಎಸ್. ಎಸ್. ಒಡೆಯರ, ಎಂ.ಎ., ಎಲ್‌ಎಲ್.ಬಿ.
ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.





ಪ್ರಥಮ ಮುದ್ರಣ, ೨೦೦೦ ಪ್ರತಿಗಳು, ಆಗಸ್ಟ, ೧೯೬೬.

ದ್ವಿತೀಯ ಮುದ್ರಣ, ೩೦೦೦ ಪ್ರತಿಗಳು, ಸಪ್ಟಂಬರ, ೧೯೬೯.



ಮುದ್ರಕರು :
ಎಮ್. ಎನ್. ಹೊರಡಿ
ಕ್ವಾಲಿಟಿ ಪ್ರಿಂಟರ್ಸ್,
ಮಾರ್ಕೆಟ್, ಧಾರವಾಡ.

ಬೆಲೆ : ಒಂದು ರೂಪಾಯಿ

# ವಿಷಯಸೂಚಿಕೆ


ಪುಟ

ಮುನ್ನುಡಿ . . . . v

೧. ರನ್ನನ ಕಾಲ - ದೇಶ - ವ್ಯಕ್ತಿತ್ವ . . . ೧
—ಡಾ. ಎ. ಎನ್. ಉಪಾಧ್ಯೆ, ಎಂ.ಎ., ಡಿ.ಲಿಟ್.

೨. ಅಜಿತನಾಥ ಪುರಾಣ . . . ೧೧
—ಡಾ. ಎಂ. ಎಸ್. ಸುಂಕಾಪುರ, ಎಂ.ಎ., ಪಿಎಚ್.ಡಿ.

೩. ರನ್ನನ ಗದಾಯುದ್ಧ . . . ೨೬
—ಪ್ರಿನ್ಸಿಪಾಲ್ ಆರ್. ವಾಯ್. ಧಾರವಾಡಕರ, ಎಂ.ಎ.

೪. ರನ್ನನ ಕಾವ್ಯಗಳಲ್ಲಿ ಪಾತ್ರನಿರೂಪಣೆ . . ೪೬
—ಪ್ರೊ. ವ್ಹಿ. ಜಿ. ಕುಲಕರ್ಣಿ,
ಎಂ.ಎ., ಎಲ್ಎಲ್.ಬಿ.

೫. ರನ್ನನ ಕಾವ್ಯದಲ್ಲಿ ನಾಟಕೀಯತೆ . . ೬೫
—ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.

೬. ರನ್ನನ ಕಾವ್ಯಶೈಲಿ . . . . ೮೧
—ಪ್ರೊ. ಎಸ್. ಎಸ್. ಮಾಳವಾಡ, ಎಂ.ಎ.

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ಶಾಖೆಯು ಪ್ರೌಢವಾದ ಹಾಗು ಸಂಶೋಧನಾತ್ಮಕ ಗ್ರಂಥಗಳನ್ನೂ, ಪತ್ರಿಕೆಗಳನ್ನೂ ಪ್ರಕಟಿಸುವುದರ ಜೊತೆಗೆ ಸಾಮಾನ್ಯ ಜನತೆಗಾಗಿ ಹಲವು ಜ್ಞಾನ ಪ್ರಸಾರದ ಯೋಜನೆಗಳನ್ನೂ ಕೈಕೊಂಡಿದೆ. ಸಂಚಾರಿ ವಾಚನಾಲಯ ಹಾಗು ಗ್ರಾಮಾಂತರ ಉಪನ್ಯಾಸ ಶಿಬಿರಗಳು ಜ್ಞಾನವಾಹಿನಿಯನ್ನು ಊರೂರಿಗೆ ಕೊಂಡೊಯ್ಯುವಲ್ಲಿ ಉಪಯುಕ್ತವಾದ ಕಾರ್ಯ ನಿರ್ವಹಿಸುತ್ತಿವೆ. ಉಪನ್ಯಾಸ ಗ್ರಂಥಮಾಲೆಯ ವಿವಿಧ ವಿಷಯಗಳ ಮೇಲಿನ ಚಿಕ್ಕ ಚಿಕ್ಕ ಪುಸ್ತಕಗಳು ಜನರ ಮೆಚ್ಚಿಕೆಗೆ ಪಾತ್ರವಾಗಿ ಅವರ ಜ್ಞಾನ ಸಂವರ್ಧನೆಗೆ ಪೋಷಕವಾಗಿವೆ. ವಿಶ್ವವಿದ್ಯಾಲಯ ಹಾಗು ಜನಸಾಮಾನ್ಯರ ನಡುವೆ ಬೆಳೆಯುತ್ತಿರುವ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಪರ್ಕ ಈ ಶಾಖೆಯ ಕಾರ್ಯದಕ್ಷತೆಗೆ ಉತ್ತಮ ನಿದರ್ಶನವಾಗಿದೆಯೆಂದು ಹೇಳಬಹುದು.

ಪೂರ್ಣ ವಿದ್ಯಾಪರಿಣತರಲ್ಲದಿದ್ದರೂ ಅಭ್ಯಾಸದಲ್ಲಿ ವಿಶೇಷ ಅಭಿರುಚಿಯುಳ್ಳ ವಿದ್ಯಾವ್ಯಾಸಂಗಿಗಳ ಸಂಖ್ಯೆ ನಮ್ಮ ನಾಡಿನಲ್ಲಿ ಸಾಕಷ್ಟು ಪ್ರಮಾಣದಲ್ಲಿದೆ. ಇಂಥವರ ಜ್ಞಾನಾರ್ಜನೆಗೆ ಸಹಾಯಕವಾಗುವಂತೆ ಯೋಜನೆಯನ್ನೊಂದನ್ನು ರೂಪಿಸಿ, ವಿಶೇಷ ವಾಙ್ಮಯ ಪ್ರಸಾರೋಪನ್ಯಾಸ ಶಿಬಿರಗಳನ್ನು ವಿಶ್ವವಿದ್ಯಾಲಯ ಕಳೆದ ನಾಲ್ಕೈದು ವರ್ಷಗಳಿಂದ ನಡೆಸುತ್ತ ಬಂದಿದೆ. ಗ್ರಾಮಾಂತರ ಉಪ-ನ್ಯಾಸ ಶಿಬಿರಗಳು ಕಾಲೇಜುಗಳಿಲ್ಲದ ಊರುಗಳಲ್ಲಿ ನಡೆದರೆ, ಈ ವಿಶೇಷ ಉಪನ್ಯಾಸ ಶಿಬಿರಗಳನ್ನು ನಡೆಸಲು ಕಾಲೇಜುಗಳಿರುವ ದೊಡ್ಡ ಊರುಗಳನ್ನೇ ಆಯ್ದುಕೊಳ್ಳಲಾಗುತ್ತದೆ. ಇವುಗಳಿಗೂ ಜನತೆಯಿಂದ ತುಂಬ ಪ್ರೋತ್ಸಾಹ ದೊರೆಯುತ್ತಿದ್ದು ವಿಶ್ವವಿದ್ಯಾಲಯದ ಜ್ಞಾನ ಪ್ರಸಾರದ ಧ್ಯೇಯ ಹೀಗೆ ಉಭಯ ಮುಖವಾಗಿ ಈಡೇರುವಂತಾಗಿದೆ.

ಒಂದು ವಿಷಯದ ವಿವಿಧ ಮುಖಗಳನ್ನು ಕುರಿತು ತಜ್ಞರಾದವರು ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುವುದರಿಂದ ಈ ವಿಷಯದ ಸ್ಪಷ್ಟ ಕಲ್ಪನೆ ಕೇಳುಗರಿಗೆ ಉಂಟಾಗುವುದಲ್ಲದೆ ವಿಶೇಷ ಅಭ್ಯಾಸಿಗಳಿಗೂ ಇದರಿಂದ ನೆರವು

ದೊರೆಯಬಹುದು. ಪ್ರಾರಂಭದಲ್ಲಿ ಕೆಲವು ಪ್ರಮುಖ ಕನ್ನಡ ಕವಿಗಳನ್ನು ಈ ಬಗೆಯ ಅಭ್ಯಾಸಕ್ಕೆ ಆರಿಸಿಕೊಂಡಿದ್ದು ಮುಂದೆ ಇತರ ವಿಷಯಗಳ ಮೇಲೂ ವಿವೇಚನೆ ನಡೆಯುವಂತೆ ಯೋಜಿಸಲಾಗಿದೆ.

ಉಪನ್ಯಾಸ ಗ್ರಂಥಮಾಲೆಯ ಪುಸ್ತಕಗಳಂತೆಯೇ ಈ ವಿಶೇಷ ವಾಙ್ಮಯ ಪ್ರಸಾರೋಪನ್ಯಾಸಗಳನ್ನೂ ಗ್ರಂಥರೂಪದಲ್ಲಿ ಪ್ರಕಟಿಸಿ, ಸುಲಭ ಬೆಲೆಯಲ್ಲಿ ಜನತೆಗೆ ಒದಗಿಸುವ ಯೋಜನೆಯನ್ನು ವಿಶ್ವವಿದ್ಯಾಲಯದ ಪ್ರಕಟನ ಶಾಖೆ ಕೈಕೊಂಡಿದೆ. ಸಾಹಿತ್ಯ ಪ್ರೇಮಿಗಳಿಗೂ, ಕಾವ್ಯಜಿಜ್ಞಾಸುಗಳಿಗೂ ಈ ಗ್ರಂಥ ತುಂಬ ಪ್ರಯೋಜನಕಾರಿಯಾಗುತ್ತದೆಂದು ನಂಬಿದ್ದೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೫-೮-೧೯೬೬

ಡಾ. ಡಿ. ಪಾವಟೆ,
ಉಪಕುಲಪತಿ

# ರನ್ನ ಕವಿಯ

## ಕಾಲ, ದೇಶ ಮತ್ತು ವ್ಯಕ್ತಿತ್ವ

ಶ್ರೇಷ್ಠ ಕನ್ನಡಕವಿಯಾದ ರನ್ನನು ಹುಟ್ಟಿಬೆಳೆದ ನಾಡಿನಲ್ಲಿ ಬಂದು ಅವನ ವಿಷಯವಾಗಿ ಕೆಲವು ವಿಚಾರಗಳನ್ನು ಪ್ರಕಟಿಸುವ ಅವಕಾಶವನ್ನು ನನಗೆ ಕಲ್ಪಿಸಿಕೊಟ್ಟಿದಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ನಾನು ಕನ್ನಡ ಪಂಡಿತನಲ್ಲ. ಆದರೂ ಕನ್ನಡ ಭಾಷೆ ಮತ್ತು ವಾಙ್ಮಯ, ಕನ್ನಡ ನಾಡಿನ ಸಂಸ್ಕೃತಿ ಮತ್ತು ಇತಿಹಾಸ ಇವು-ಗಳಲ್ಲಿ ವಿಶೇಷ ರುಚಿಯುಳ್ಳವನು. ಕನ್ನಡ ಕವಿಗಳ ಅಭ್ಯಾಸವಾದರೂ ನಾನು ಮಾಡಿದ್ದು ವಾಙ್ಮಯದ ಇತಿಹಾಸದ ದೃಷ್ಟಿಯಿಂದಲೇ. ನಮ್ಮ ನಾಡಿನಲ್ಲಿ ಸಂಸ್ಕೃತ ಕವಿಗಳಂತೆ ಹಿರಿಮೆಟ್ಟನ್ನು ಪಡೆದವರು ಕನ್ನಡ ಕವಿಗಳು. ನಾವು ಆಗಾಗ್ಗೆ ಅವರ ವಿಷಯವಾಗಿ ಚರ್ಚಿಸುತ್ತೇವೆ. ಆದರೆ ನನ್ನ ತಿಳಿವಳಿಕೆಯಂತೆ ಕನ್ನಡ ಕವಿಗಳ ಕಾವ್ಯಗಳ ಅಭ್ಯಾಸವು ಆಗಬೇಕಾದಷ್ಟು ಇನ್ನೂ ಆಗಿಲ್ಲ. ಪಂಪ, ರನ್ನ, ಷಡಕ್ಷರಿಗಳ ಕಾವ್ಯಗಳನ್ನು ಪಂಡಿತರು ಮಾತ್ರ ಓದುತ್ತಾರೆ. ಕಾಲೇಜಿನ ವಿದ್ಯಾರ್ಥಿಗಳಿಗೆ ಕೆಲವು ಅಂಶಗಳನ್ನು ಓದಬೇಕಾಗುತ್ತದೆ. ಆದರೆ ಕನ್ನಡ ನಾಡಿನ ಬಹುಸಂಖ್ಯ ನಾಗರಿಕರು ಈ ಕಾವ್ಯಗಳ ಹೆಸರು ಮಾತ್ರ ಕೇಳಿ ಬಲ್ಲರು. ಕೃತಿಗಳ ಪ್ರತ್ಯಕ್ಷ ಅಧ್ಯಯನ ಬಹಳ ಕಡಿಮೆ. ಪ್ರಾಚೀನ ಕನ್ನಡ ಉದ್ಗ್ರಂಥಗಳು ಹೊಸಗನ್ನಡದಲ್ಲಿ ಅನುವಾದವಾಗಬೇಕು; ಮತ್ತು ಮನೆಮನೆಗೆ ಅವುಗಳ ವಾಚನವು ನಡೆದರೆ ಕನ್ನಡ-ನಾಡಿನ ಸಂಸ್ಕೃತಿಯ ಪ್ರವಾಹವು ಚಿರಂತನವಾಗಿ ಹರಿಯಬಹುದು. ಈ ಕಾವ್ಯಗಳ ಅನುವಾದವು ಭಾರತೀಯ ಭಿನ್ನ ಭಿನ್ನ ಭಾಷೆಗಳಲ್ಲಿ ಆಗಬೇಕು. ಅಂದರೆ ಕನ್ನಡ ಕಾವ್ಯಗಳ ರಸಗ್ರಹಣವು ಇಡೀ ಭಾರತದಲ್ಲೆಲ್ಲ ಸಾರ್ವತ್ರಿಕ-ವಾಗಬಹುದು.

ದೊಡ್ಡ ವಿದ್ವಾಂಸರು ಮತ್ತು ಕವಿಗಳು ಆಯಾ ದೇಶ, ಕಾಲಗಳಲ್ಲಿ ಹುಟ್ಟಿ ಒಂದು ಹೊಸ ಯುಗವನ್ನೇ ಆರಂಭಿಸುತ್ತಾರೆ. ಅದರಂತೆ ವಿಶಿಷ್ಟ ಪರಿಸ್ಥಿತಿಯಲ್ಲಿ ಅವರು ಜನ್ಮ ತಾಳುತ್ತಾರೆ. ಇವೆರಡೂ ಮಾತುಗಳು ಅಷ್ಟೇ ನಿಜ. ಕ್ರಿಸ್ತಶಕದ ಒಂದು ಸಾವಿರದ ಪರಿಸರವೆಂದರೆ ಕನ್ನಡನಾಡಿನಲ್ಲಿ ವೈಶಿಷ್ಟ್ಯ-ಪೂರ್ಣವಾದ ಯುಗವು. ಅದನ್ನು ಸುವರ್ಣಯುಗವೆಂದು ಕರೆಯಲಾಗಿದೆ. ವಿಶೇಷತಃ ಈ ನಾಡಿನ ಜೈನ ವಾಙ್ಮಯದಲ್ಲಿ ಅದೊಂದು ಹಿರಿಮೆಯ ಕಾಲ. ಅಮೋಘವರ್ಷ ನೃಪತುಂಗನಂಥ ಕವಿರಾಜನು ಮತ್ತು ಅವನ ಆಸ್ಥಾನದಲ್ಲಿ ಅಥವಾ ರಾಜ್ಯದಲ್ಲಿ ಪ್ರಸಿದ್ಧಿಪಡೆದ ಜಿನಸೇನ ಶಾಕಟಾಯನ ಮೊದಲಾದ ವಿದ್ವಜ್ಜನರು ಕನ್ನಡನಾಡಿನಲ್ಲಿ ಒಂದು ಪಾಂಡಿತ್ಯಪೂರ್ಣ ಯುಗವನ್ನು ಆರಂಭಿಸಿದರು. ಮಹಾಪುರಾಣದಂಥ ಸಂಸ್ಕೃತಗ್ರಂಥವು ಜೈನಸಮಾಜಕ್ಕೆ ಒಂದು ತಳಹದಿಯಾಯಿತು. ಧವಲಾ ಜಯಧವಲಾ ಟೀಕೆಗಳು ಮುಂದಿನ ಆಚಾರ್ಯರಿಗೆ ಅಭ್ಯಾಸದ ವಿಷಯಗಳಾದವು. ಇವರಿಂದ ಆರಂಭಿಸಲ್ಪಟ್ಟ ಯುಗದಲ್ಲಿ ಪಂಪನಂಥ ಕನ್ನಡ ಕೋವಿದರು (ಕ್ರಿ. ಶ. ೯೪೧), ಸೋಮದೇವನಂಥ ಸಂಸ್ಕೃತ ಪಂಡಿತರು (ಕ್ರಿ. ಶ. ೯೫೯), ಮತ್ತು ಪುಷ್ಪದಂತನಂಥ ಉದ್ದಾಮ ಅಪಭ್ರಂಶಕವಿಗಳು (ಕ್ರಿ. ಶ. ೯೫೯) ಕನ್ನಡನಾಡಿನಲ್ಲಿ ಒಂದು ವಿಶಿಷ್ಟ ವಾಙ್ಮಯದ ಪ್ರೇರಣೆಯನ್ನು ಹರಿಸಿಬಿಟ್ಟರು. ಇದೇ ಕಾಲದಲ್ಲಿ ನಮ್ಮ ರನ್ನಕವಿಯು ಕ್ರಿ. ಶ. ೯೪೯ರಲ್ಲಿ ಹುಟ್ಟಿದನು. ಅವನು ಕಿರಿಯವನಿದ್ದಾಗಲೇ ಪಂಪ, ಸೋಮದೇವ, ಪುಷ್ಪದಂತಕವಿಗಳ ಕೀರ್ತಿಯು ಅವನ ಕಿವಿಯಮೇಲೆ ಬಿದ್ದಿರಬಹುದು ಮತ್ತು ಅವನಲ್ಲಿ ಕಾವ್ಯಸ್ಫೂರ್ತಿಯನ್ನು ಸ್ಫುರಿಸಿರಬಹುದು. ರನ್ನನು ವಯಸ್ಕನಾದ ಕಾಲವೆಂದರೆ ಕರ್ನಾಟಕದಲ್ಲಿ ಅದೊಂದು ಸೌಭಾಗ್ಯದ ಕಾಲ. ಇದೇ ಸಮಯದಲ್ಲಿ ಗಂಗರಾಜರ ಮಂತ್ರಿಯೂ, ಸೇನಾಪತಿಯೂ ಆದ ಚಾಮುಂಡರಾಯನು ಬೆಳೆದು ದೊಡ್ಡವನಾದನು. ಈ ಕಾರಣವಾಗಿಯೇ ಅವನ ಆಶ್ರಯವನ್ನು ಪಡೆಯಲು ರನ್ನನು ತಾನು ಹುಟ್ಟಿದ ನಾಡನ್ನು ಬಿಟ್ಟು ಗಂಗರ ರಾಜ್ಯಕ್ಕೆ ತೆರಳಿದನು. ಚಾಮುಂಡರಾಯನ ಆಶ್ರಯವು ರನ್ನನಿಗೆ ದೊರೆತದ್ದು ಒಳ್ಳೆಯ ಮಹತ್ವದ ಘಟನೆ. ಚಾಮುಂಡ-ರಾಯನೆಂದರೆ ಆ ಕಾಲದ ಅಲೌಕಿಕ ಮತ್ತು ಅಸಾಮಾನ್ಯ ವ್ಯಕ್ತಿ ದೊಡ್ಡ ದೊಡ್ಡ ಯುದ್ಧಗಳನ್ನು ಆತನು ಗೆದ್ದವನು. ತನ್ನ ಒಡೆಯನಾದ ಗಂಗವಂಶದ

ಮಾರಸಿಂಹನಿಗೆ (ಕ್ರಿ. ಶ. ೯೬೧ ರಿಂದ ೯೭೪) ಮತ್ತು ರಾಚಮಲ್ಲನಿಗೆ ಅಭ್ಯುದಯವನ್ನು ಪ್ರಾಪ್ತಮಾಡಿಕೊಟ್ಟನು. ಚಾಮುಂಡರಾಯನು ಸಮರ ಧುರಂಧರನಷ್ಟೇ ಅಲ್ಲ ಕಾವ್ಯಕುಶಲನೂ ಹೌದು. ಈತನು ಬರೆದ ತ್ರಿಷಷ್ಟಿ-ಲಕ್ಷಣ ಮಹಾಪುರಾಣ ಅಥವಾ ಚಾಮುಂಡರಾಯ ಪುರಾಣವು ಕನ್ನಡ ವಾಙ್ಮಯದಲ್ಲಿ ಪ್ರಸಿದ್ಧ ಗ್ರಂಥವು. ಇದನ್ನು ಆತನು ಮುಗಿಸಿದ್ದು ಕ್ರಿ. ಶ. ೯೭೮ ರಲ್ಲಿ. ಇಡೀ ವಿಶ್ವದಲ್ಲಿಯೇ ಅದ್ಭುತ ಶಿಲ್ಪವೆಂದು ಹೆಸರುವಾಸಿಯಾದ ಶ್ರವಣಬೆಳಗೊಳದಲ್ಲಿಯ ಬಾಹುಬಲಿಯ ಅಖಂಡಮೂರ್ತಿ ಚಾಮುಂಡ-ರಾಯನಿಂದ ನಿರ್ಮಿತವಾದುದು. ಈ ಮೂರ್ತಿಯ ಪ್ರತಿಷ್ಠೆಯಾದದ್ದು ಕ್ರಿ, ಶ. ೯೮೩ರಲ್ಲಿ. ಚಾಮುಂಡರಾಯನ ಆಶ್ರಿತನಾದ ನಮ್ಮ ರನ್ನನು ಈ ಎಲ್ಲ ಘಟನೆಗಳನ್ನು ಕಣ್ಣಾರೆ ಕಂಡಿರಬಹುದು. ವಿಶೇಷವಾಗಿ ತಿಳಿದು ಕೊಂಡಿರಬಹುದು. ಚಾಮುಂಡರಾಯ ಪುರಾಣ ಮತ್ತು ಅಜಿತನಾಥ ಪುರಾಣ ಗಳಲ್ಲಿ ಕೆಲವು ಅಂಶಗಳು ಸಮಾನವಾಗಿ ದೊರೆಯುತ್ತವೆ. ಆಶ್ರಯದಾತನಾದ ಚಾಮುಂಡರಾಯನಿಗೆ ಕಾವ್ಯರಚನೆಯಲ್ಲಿ ರನ್ನನು ಸಹಾಯ ಮಾಡಿರಬಹುದು ಅಥವಾ ಅವನ ಗ್ರಂಥವನ್ನು ಅಲ್ಲಲ್ಲಿ ತಿದ್ದಿರಬಹುದು.

ರನ್ನನು ಧಾರ್ಮಿಕವೃತ್ತಿಯವನು. ಆಳವಾದ ಧರ್ಮಾಭ್ಯಾಸವನ್ನು ಮಾಡಬೇಕೆಂಬ ಆಕಾಂಕ್ಷೆಯಿಂದ ಆತನು ಚಾಮುಂಡರಾಯನ ಗುರುವಾದ ಅಜಿತಸೇನಾಚಾರ್ಯರ ಪಾದಮೂಲವನ್ನು ಪಡೆದದ್ದು ಸ್ವಾಭಾವಿಕವೇ. ಇವರೇ ರನ್ನನ ಗುರುಗಳು. ಚಾಮುಂಡರಾಯ ಮತ್ತು ರನ್ನನಂಥ ಶಿಷ್ಯರಿದ್ದ ಅಜಿತಸೇನರು ಆ ಕಾಲದ ಅಲೌಕಿಕ ಆಚಾರ್ಯರು. ಚಾಮುಂಡರಾಯನು ಇವರಿಗೆ ಭುವನಗುರುಗಳೆಂದು ಕರೆದಿದ್ದಾನೆ. ಆ ಕಾಲದಲ್ಲಿ ಈ ಗುರುಗಳ ಧಾರ್ಮಿಕ ಪ್ರಭಾವವು ಇಡೀ ಸಮಾಜದ ಮೇಲಷ್ಟೇ ಅಲ್ಲ ಆಯಾ ಕಾಲದ ರಾಜರ ಮೇಲೂ ಇದ್ದದ್ದು ಕಂಡುಬರುತ್ತದೆ. ಗಂಗರಾಜರಾದ ಮಾರಸಿಂಹ ಮತ್ತು ರಾಚಮಲ್ಲರು ಇವರ ಶಿಷ್ಯರೇ. ಶ್ರವಣಬೆಳಗೊಳದ ಶಿಲಾಲೇಖದಲ್ಲಿ ಉಲ್ಲೇಖಿತವಾದಂತೆ ಮಾರಸಿಂಹನು ತನ್ನ ರಾಜ್ಯವನ್ನು ಬಿಟ್ಟು, ಸಲ್ಲೇಖನಾ ವ್ರತವನ್ನು ಮೂರುದಿನಗಳ ವರೆಗೆ ಕೈಕೊಂಡು ಅಜಿತಸೇನಾಚಾರ್ಯರ ಸನ್ನಿಧಿಯಲ್ಲಿ ಬಂಕಾಪುರದೊಳಗೆ ದೇಹತ್ಯಾಗವನ್ನು ಮಾಡಿದನು. ಗಂಗರಾಜ್ಯ ದಲ್ಲಿ ಅಷ್ಟೇ ಅಲ್ಲ, ಹೊರನಾಡ ಈಗಿನ ಧಾರವಾಡಜಿಲ್ಲೆಯ ಪರಿಸರದಲ್ಲಿಯೂ

ಅಜಿತಸೇನಾಚಾರ್ಯರ ಪ್ರಭಾವವು ಇದ್ದದ್ದು ಕಂಡು ಬರುತ್ತದೆ. ಚಾಮುಂಡ ರಾಯನ ಅಸಾಧಾರಣ ಆಶ್ರಯವನ್ನು ರನ್ನನು ಪಡೆದಂತೆ ಆಯಾಕಾಲದ ದೊಡ್ಡ ದೊಡ್ಡ ಆಚಾರ್ಯರು ಚಾಮುಂಡರಾಯನಿಂದ ಆಕೃಷ್ಟರಾಗಿದ್ದರು. ಚಾಮುಂಡರಾಯನ ಮತ್ತೊಂದು ಪ್ರೀತಿಯ ಹೆಸರು 'ಗೊಮ್ಮಟ'. ಅವನಿಂದ ನಿರ್ಮಿತವಾದ ಬಾಹುಬಲಿಯ ಮೂರ್ತಿಯು ಗೊಮ್ಮಟೇಶ್ವರ. ಅವನಿಗೆ ಪ್ರೇಮದಿಂದ ಎಷ್ಟೋ ಜನರು ಅಣ್ಣನೆಂದೂ, ರಾಯನೆಂದೂ ಕರೆಯುತ್ತಿದ್ದರು. ಚಾಮುಂಡರಾಯನ ಅಭ್ಯಾಸಕ್ಕಾಗಿ ಷಟ್ಖಂಡಾಗಮ ಗ್ರಂಥಗಳ ಸಾರಾಂಶವನ್ನು ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳು ಅದೇ ಕಾಲದಲ್ಲಿ ಗೊಮ್ಮಟಸಾರವೆಂಬ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಈ ಗ್ರಂಥವು ಚಾಮುಂಡರಾಯ ಅಥವಾ ಗೊಮ್ಮಟನ ದೆಸೆಯಿಂದ ಬರೆಯಲ್ಪಟ್ಟಿದ್ದರಿಂದ ಈ ಗ್ರಂಥದ ಹೆಸರು ಗೊಮ್ಮಟ ಸಾರ. ಈ ಸುಮಾರಕ್ಕೆ ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳ ಸಮಕಾಲೀನರಾದ ಎಷ್ಟೋ ಆಚಾರ್ಯರ ಹೆಸರುಗಳನ್ನು ನಾವು ಉಲ್ಲೇಖಿಸ-ಬಹುದು. ಚಂದ್ರಪ್ರಭಚರಿತವನ್ನು ಬರೆದ ವೀರನಂದಿಯು, ಗೊಮ್ಮಟಸಾರದ ರಚನೆಯಲ್ಲಿ ಸಹಾಯ ಮಾಡಿದ ಕನಕನಂದಿಯು, ತ್ರಿಲೋಕಸಾರಕ್ಕೆ ವ್ಯಾಖ್ಯಾನ ಬರೆದ ಮಾಧವಚಂದ್ರನು ಮೊದಲಾದ ದೊಡ್ಡ ದೊಡ್ಡ ಆಚಾರ್ಯರು ರನ್ನನ ಕಾಲದಲ್ಲಿ ಆಗಿಹೋದರು. ಇವೆಲ್ಲ ಸಂಗತಿಗಳನ್ನು ಲಕ್ಷ್ಯದಲ್ಲಿ ಇಟ್ಟು ಕೊಂಡರೆ ರನ್ನನ ಕಾಲವೆಂದರೆ ಕರ್ನಾಟಕದಲ್ಲಿ ಪ್ರಾಕೃತ ಸಂಸ್ಕೃತ ಮತ್ತು ಕನ್ನಡವಾಙ್ಮಯಕ್ಕೆ ಹಲವು ಕಾಣಿಕೆಗಳನ್ನು ಒದಗಿಸಿಕೊಟ್ಟ ವಿಶಿಷ್ಟಕಾಲವು. ರಾಜಕೀಯ ದೃಷ್ಟಿಯಿಂದಲೂ ಇದು ಮಹತ್ವದ ಕಾಲ. ಗಂಗರ ಮತ್ತು ರಾಷ್ಟ್ರಕೂಟರ ಪ್ರಭಾವವು ಕಡಿಮೆಯಾಗುತ್ತ ಹೋಯಿತು. ಚಾಲುಕ್ಯರು ಪ್ರಬಲರಾದರು. ಆಗಾಗ್ಗೆ ಒಂದು ಕಡೆ ಚೋಳರ ಕೂಡ ಮತ್ತೊಂದು ಕಡೆ ಪರಮಾರರ ಕೂಡ ಅವರಿಗೆ ಹೋರಾಡಬೇಕಾಯಿತು. ತನ್ನ ಸಾಹಸದಿಂದ ಚಾಲುಕ್ಯಕುಲವನ್ನು ಬೆಳಗಿದವನು ಚಾಲುಕ್ಯಚಕ್ರವರ್ತಿ ಇರಿವಬೆಡಂಗ ಸತ್ಯಾಶ್ರಯ. ಗಂಗರಾಜ್ಯದಲ್ಲಿ ಚಾಮುಂಡರಾಯನ ಆಶ್ರಯವು, ಚಾಲುಕ್ಯ ರಾಜ್ಯದಲ್ಲಿ ಸತ್ಯಾಶ್ರಯನ ಆಧಾರವು ರನ್ನನಿಗೆ ದೊರೆಯಿತು.

ನಮ್ಮ ನಾಡಿನ ಪರಂಪರೆಯೆಂದರೆ ದೊಡ್ಡ ದೊಡ್ಡ ಕವಿಗಳು ತಮ್ಮ ವಿಷಯವಾಗಿ ಏನೂ ಹೇಳದಿರುವದು. ಕಾಲಿದಾಸನು ಹುಟ್ಟಿ ಬೆಳೆದ ಪ್ರದೇಶದ

ಕುರಿತು ಈ ವರೆಗೂ ನಮಗೆ ಏನೂ ಖಚಿತವಾಗಿ ಗೊತ್ತಾಗಲಿಲ್ಲ. ಪ್ರಾದೇಶಿಕ ಅಭಿಮಾನದಿಂದ ಈ ಭಾರತೀಯ ಕವಿಯು ತಮ್ಮ ತಮ್ಮ ಪ್ರದೇಶದಲ್ಲಿ ಹುಟ್ಟಿ ಬೆಳೆದವನೆಂದು ಪಂಡಿತರು ತಮ್ಮ ತಮ್ಮ ವಾದಗಳನ್ನು ಮಂಡಿಸುತ್ತಾರೆ. ಸುದೈವದಿಂದ ನಮ್ಮ ರನ್ನನು ತನ್ನ ವಿಷಯವಾಗಿ ಹಲವು ಸಂಗತಿಗಳನ್ನು ತನ್ನ ಕಾವ್ಯಗಳಲ್ಲಿ ನಿರೂಪಿಸಿದ್ದಾನೆ. ರನ್ನನು ಹುಟ್ಟಿದ್ದು ಬೆಳುಗರೆ ನಾಡಿನ ಬೆಳುಗಲ ದೇಶದ, 'ಐನೂರಿನಲ್ಲಿ ಅಗ್ಗಳವೆನಿಸಿದ ಜಂಬುಖಂಡಿ ಎಪ್ಪತ್ತರಲ್ಲಿ' ಶ್ರೇಷ್ಠವಾದ ಮುದುವೊಳಲ ಎಂಬ ಗ್ರಾಮದಲ್ಲಿ. ಸಮೀಪದಲ್ಲಿದ್ದ ಘಟ-ಪ್ರಭೆಯನ್ನು ಗಟ್ಟಿಗೆಯೆಂದು, ಕೃಷ್ಣೆಯನ್ನು ಪೆರ್ದೊರೆ ಅಥವಾ ಹಿರಿ ಹೊಳೆಯೆಂದು ನಿರ್ದಿಷ್ಟ ಮಾಡಿದ್ದಾನೆ. ಈಗಿನ ಜಮಖಂಡಿ, ಮುಧೋಳ ಮತ್ತು ತೇರದಾಳ ಇವುಗಳ ಪರಿಸರದಲ್ಲಿಯೇ ರನ್ನನು ಬಾಲ್ಯಕಾಲವನ್ನು ಕಳೆದದ್ದು. ಇದನ್ನೆಲ್ಲ ಕೇಳಿ ಇಲ್ಲಿಯ ಜನರ ಮೈ ಉಬ್ಬುವದು ಸ್ವಾಭಾವಿಕ. ಕವಿ ರನ್ನನ ಹೆಮ್ಮೆಯು ಅವರಲ್ಲಿ ಉಕ್ಕಿದರೆ ಆಶ್ಚರ್ಯವೇನಲ್ಲ. ರನ್ನನು ತನ್ನ ಮನೆಯ ಬಳೆಗಾರರ ಕೆಲಸವನ್ನು ಮಾಡುತ್ತ ಹುಟ್ಟೂರಿನಲ್ಲಿಯೇ ಕುಳಿತಿದ್ದರೆ ಮುಧೋಳದ ಹೊರಗೆ ಆತನ ಕೀರ್ತಿಯು ಹೋಗುತ್ತಿರಲಿಲ್ಲ, ಮತ್ತು ಕನ್ನಡನಾಡಿನ, ಕನ್ನಡ ವಾಙ್ಮಯದ ಸೌಭಾಗ್ಯವು ವೃದ್ಧಿಸುತ್ತಿರ-ಲಿಲ್ಲ. ಸಾಧಾರಣ ಅಭ್ಯಾಸವನ್ನು ಈ ಊರಲ್ಲಿಯೇ ಆತನು ಮಾಡಿರ-ಬಹುದು. ಅಜಿತಸೇನಾಚಾರ್ಯರಂಥ ಗುರುಗಳ, ಗಂಗರಾಜರ ಮಂತ್ರಿಯಾದ ಚಾಮುಂಡರಾಯನ ಕೀರ್ತಿಯನ್ನು ಕೇಳಿ ಮುಂದಿನ ಅಭ್ಯಾಸಕ್ಕೆ ಹುಟ್ಟೂರು ಬಿಟ್ಟು ರನ್ನನು ಗಂಗರಾಜ್ಯಕ್ಕೆ ಪ್ರಯಾಣ ಮಾಡಿದನು. ಕನ್ನಡ ವಾಙ್ಮಯದ ರತ್ನಗಳಲ್ಲಿ ಒಬ್ಬನಾದ ಬಾಲರನ್ನನ ಈ ಪ್ರಯಾಣ ಕನ್ನಡ ನಾಡಿನ ದಿಗ್ವಿಜಯದ ಆರಂಭವೇ ಸರಿ. ಉತ್ತರ-ದಕ್ಷಿಣ ಕರ್ನಾಟಕದ ಒಣ ಹೆಮ್ಮೆಯನ್ನು ಆ ಕಾಲದಲ್ಲಿ ದೂರುಮಾಡಿದ ವಿಶಾಲವೃತ್ತಿಯವನು ರನ್ನ. ಅವನ ಮಾರ್ಗವನ್ನು ಇಂದು ನಾವು ಸ್ವೀಕರಿಸುವದು ಅತ್ಯವಶ್ಯವಾಗಿದೆ. ಗಂಗರಾಜ್ಯದಲ್ಲಿ ಸಂಸ್ಕೃತ, ಕನ್ನಡ, ಪ್ರಾಕೃತ ಮೊದಲಾದ ಭಾಷೆಗಳ ಅಭ್ಯಾಸವನ್ನು ರನ್ನನು ಮಾಡಿದನು. ಜೈನೇಂದ್ರ ಪಾಣಿನಿಯ ವ್ಯಾಕರಣಗಳಲ್ಲಿ ನಿಷ್ಣಾತನಾದನು. ಕಾಲಿದಾಸ, ಬಾಣ, ಭಟ್ಟನಾರಾಯಣರ ಕಾವ್ಯನಾಟಕಗಳನ್ನು ಓದಿದನು. ಪಂಪ, ಪೊನ್ನರ ಗ್ರಂಥಗಳನ್ನು ಅವನು ಆತ್ಮಸಾತ್‌ಮಾಡಿಕೊಂಡನು. ಅಜಿತಸೇನಾಚಾರ್ಯ-

ರಂಥ ಗುರುಗಳ ಸಾನ್ನಿಧ್ಯದಲ್ಲಿ, ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯವರ ಪರಿಚಯದಿಂದ ಜೈನಧರ್ಮ ಮತ್ತು ಜೈನ ಸಿದ್ಧಾಂತಗಳಲ್ಲಿ ಅವನ ನಿಷ್ಠೆಯು ವಿಶೇಷವಾಗಿ ಬೆಳೆದಿರಬೇಕು. ಈ ತರದಿಂದ ದೂರ ದೇಶದಲ್ಲಿ ಹೋಗಿ ವಿದ್ಯಾಭ್ಯಾಸದಲ್ಲಿ ನಿಷ್ಣಾತನಾಗಿ ಮರಳಿ ತನ್ನ ನಾಡಿಗೆ ರನ್ನನು ಬಂದನು. ಮಾರಸಿಂಹನಂಥ ಗಂಗರಾಜನು ಸಲ್ಲೇಖನ ವ್ರತದಿಂದ ಮೃತನಾದನು. ಆ ಕಾಲಕ್ಕೆ ರಾಷ್ಟ್ರಕೂಟರು ಗಂಗರಾಜರು ತಮ್ಮ ಅಭ್ಯುದಯವನ್ನು ಕಳೆದು ಕೊಂಡರು. ರನ್ನನಂಥ ಕವಿರತ್ನವು ತಮ್ಮ ಆಸ್ಥಾನಕೋಶದಲ್ಲಿ ಇರಬೇಕೆಂದು ಯಾವ ರಾಜನಿಗೆ ಹವ್ಯಾಸವಾಗದಿರದು? ರನ್ನನು ತನ್ನ ನಾಡಿಗೆ ಮರಳಿ ಬಂದು ಚಾಲುಕ್ಯರಾಜ ತೈಲಪನಲ್ಲಿ ಆಸ್ಥಾನ ವಿದ್ವಾಂಸನಾದನು. ಈ ತೈಲಪನ ಮಗನಾದ ಸತ್ಯಾಶ್ರಯನು ಚೋಳ ರಾಜನನ್ನು ಗೆದ್ದನು. ಗುರ್ಜರ ದೇಶ ದಲ್ಲಿ ತನ್ನ ಪರಾಕ್ರಮವನ್ನು ಮೆರೆಸಿದನು. ಈ ಸತ್ಯಾಶ್ರಯನ ಸಾಹಸವು ರನ್ನನ ಮನೋಭೂಮಿಕೆಯ ಮೇಲೆ ಒಳ್ಳೆಯ ಪರಿಣಾಮವನ್ನು ಮಾಡಿರ ಬೇಕು. ಇದರ ಫಲವೆಂದರೆ ರನ್ನನ ಸುಪ್ರಸಿದ್ಧ ಗದಾಯುದ್ಧ ಅಥವಾ ಸಾಹಸಭೀಮವಿಜಯವೆಂಬ ಕನ್ನಡ ಕಾವ್ಯವು. ಈ ಕಾವ್ಯದಿಂದ ರನ್ನನ ಸನ್ಮಾನಕ್ಕೆ ಸೀಮೆಯೇ ಉಳಿಯಲಿಲ್ಲ. ಅವನಿಗೆ ಆಹವಮಲ್ಲ ತೈಲಪನಿಂದ ಪಾಲಕೀ, ಆನೆ, ಚಾಮರ, ಚಿನ್ನದ ಕೋಲು ಮೊದಲಾದ ಸನ್ಮಾನಗಳು ದೊರೆತವು. ರನ್ನನು ಕವಿಚಕ್ರವರ್ತಿಯಾದನು. ಅವನು ಲೌಕಿಕ ಮತ್ತು ಧಾರ್ಮಿಕ ಅಭ್ಯಾಸವನ್ನು ಮುಗಿಸಿದವನು. ಆಶ್ರಯದಾತನಾದ ಸತ್ಯಾ ಶ್ರಯನ ಕೀರ್ತಿಯನ್ನು ಗದಾಯುದ್ಧದಲ್ಲಿ ಹೊಗಳಿದ್ದಾನೆ. ತನ್ನ ಧಾರ್ಮಿಕ ಅಭ್ಯಾಸದ ಫಲವೆಂದು ಮುಂದೆ ಕೆಲವು ದಿವಸಗಳಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ಆಶ್ರಯದಿಂದ ರನ್ನನು ಅಜಿತತೀರ್ಥಂಕರ ಪುರಾಣವನ್ನು ಬರೆದನು. ಪಂಪನು ಮೊದಲನೇ ತೀರ್ಥಂಕರರಾದ ಆದಿನಾಥರ ಪುರಾಣ ವನ್ನು ಬರೆದರೆ ಎರಡನೇ ತೀರ್ಥಂಕರರಾದ ಅಜಿತನಾಥರ ಪುರಾಣವನ್ನು ರನ್ನನು ಬರೆದನು. ತನ್ನ ಆಶ್ರಯದಾತನಾದ ಸತ್ಯಾಶ್ರಯನ ಲೌಕಿಕ ಋಣ-ವನ್ನು ಸಾಹಸಭೀಮವಿಜಯ ಕಾವ್ಯದಿಂದ ತೀರಿಸಿದಂತೆ, ಅಜಿತನಾಥ ಪುರಾಣ ವನ್ನು ಬರೆದು ತನ್ನ ಧಾರ್ಮಿಕ ಗುರುಗಳಾದ ಅಜಿತಸೇನರ ಧಾರ್ಮಿಕ ಋಣ-ವನ್ನು ರನ್ನನು ತೀರಿಸಿದಂತೆ ತೋರುತ್ತದೆ. ರನ್ನನು ಈ ಕಾರಣವಾಗಿ

ಸಮಗ್ರಕರ್ನಾಟಕದ ಕವಿ. ಮುಧೋಳದಲ್ಲಿ ಹುಟ್ಟಿದ್ದರೂ ಶ್ರವಣಬೆಳಗೊಳದ ಕಲ್ಲುಬಂಡೆಯ ಮೇಲೆ ಕವಿರತ್ನವೆಂಬ ಅವನ ಹೆಸರು ಅಂಕಿತವಾಗಿದೆ. ಹುಟ್ಟಿ ಬೆಳೆದ ನಾಡಿನಲ್ಲಿಗಿಂತ ವಿದ್ಯಾಭ್ಯಾಸದ ಕ್ಷೇತ್ರದಲ್ಲಿಯೇ ಅವನ ಹೆಸರು ಇಂದಿಗೂ ಮೆರೆಯುತ್ತಿದೆ. ಬೆಳುಗರೆಯ ನಾಡಿನಿಂದ ಬೆಳಗೊಳದ ವರೆಗೆ ತನ್ನ ಕಾವ್ಯವಲ್ಲರಿಯನ್ನು ಪಸರಿಸಿದ ರನ್ನನು ನಿಜವಾಗಿಯೂ ಸಮಗ್ರ ಕನ್ನಡ ದೇಶದವನು. ಇಡೀ ಕನ್ನಡ ನಾಡಿನಲ್ಲಿ ಅವನ ಗ್ರಂಥಗಳು ಮನೆಮನೆಯಲ್ಲಿ ಓದಲ್ಪಡುವಂತೆ ಹೊಸಗನ್ನಡದಲ್ಲಿ ಅನುವಾದವಾಗಿ ನಮಗೆ ದೊರೆಯಬೇಕು.

ರನ್ನನು ವೈಶ್ಯವೃತ್ತಿಯ ಮನೆಯಲ್ಲಿ ಹುಟ್ಟಿಬೆಳೆದಿದ್ದರೂ ಏನೋ ಜ್ಞಾನಾವರಣೀಯ ಕರ್ಮದ ಕ್ಷಯೋಪಶಮದಿಂದ ಅವನಲ್ಲಿ ಜ್ಞಾನದ ಬಲವು ಜನ್ಮತಃ ಇದ್ದಂತೆ ಕಂಡುಬರುತ್ತದೆ. ಈ ಜ್ಞಾನಲಾಲಸೆಯಿಂದಲೇ ಆತನು ತನ್ನ ಬಡನಾಡನ್ನು ಬಿಟ್ಟು ಸಮೃದ್ಧವಾದ ಗಂಗರಾಜ್ಯಕ್ಕೆ ತೆರಳಿದನು. ಚಾಮುಂಡರಾಯನ ಆಶ್ರಮದಿಂದ ಎಲ್ಲ ವಿದ್ಯೆಗಳನ್ನು ಕಲಿತುಕೊಂಡನು. ಮತ್ತು ಅಜಿತಸೇನಾಚಾರ್ಯರ ಪಾದಮೂಲದಲ್ಲಿ ತನ್ನ ಧಾರ್ಮಿಕಪ್ರವೃತ್ತಿಗೆ ನೀರು, ಗೊಬ್ಬರ ಹಾಕಿದನು. ಇವನ ಪಾಂಡಿತ್ಯವು ಆನುವಂಶಿಕವಲ್ಲ. ಆದರೆ ಒಳ್ಳೆಯ ಪ್ರಯಾಸದಿಂದ, ಬಲು ಅಭ್ಯಾಸದಿಂದ, ದೀರ್ಘಶ್ರಮದಿಂದ ದೊರಕಿಸಿದುದು. ತನ್ನ ನಾಡನ್ನು ಬಿಟ್ಟು ಅಭ್ಯಾಸಕ್ಕಾಗಿ ಪರನಾಡಿಗೆ ಆ ಕಾಲದಲ್ಲಿ ಹೋಗುವದು ಸಾಹಸದ ವಿಷಯ. ರಾಜಾಶ್ರಯವು ದೊರೆತರೂ ದೀರ್ಘೋದ್ಯೋಗದ ಹೊರತು ಸರಸ್ವತಿಯು ಪ್ರಸನ್ನವಾಗಲಾರಳು. ರನ್ನನಲ್ಲಿ ಸ್ವಾಭಾವಿಕ ಪ್ರತಿಭೆಯಿತ್ತು. ಅವನ ಕಾವ್ಯಗಳನ್ನು ನಾವು ಓದಿದರೆ ಅವನ ದೀರ್ಘಪರಿಶ್ರಮದ ಕಲ್ಪನೆಯೂ ನಮಗೆ ಬರುತ್ತದೆ. ಪಂಪ ಮತ್ತು ಭಟ್ಟ-ನಾರಾಯಣನ ಕಾವ್ಯನಾಟಕಗಳನ್ನು ರನ್ನನು ಆಳವಾಗಿ ಮನನ ಮಾಡಿಕೊಂಡಿ-ದ್ದನು. ಅಂತೆಯೇ ಅವರ ವಿಚಾರಗಳು, ಅವರ ಶಬ್ದಪ್ರಯೋಗಗಳು ಆತನ ಕಾವ್ಯಗಳಲ್ಲಿ ಸ್ವಾಭಾವಿಕವಾಗಿ ಪ್ರತಿಬಿಂಬಿತವಾಗಿವೆ. ರನ್ನನು ಸಾಮಾನ್ಯ ವ್ಯಕ್ತಿಯಲ್ಲ. ತಾನು ಸಾಮಾನ್ಯನಲ್ಲವೆಂಬ ಆತ್ಮವಿಶ್ವಾಸವೂ ಅವನಲ್ಲಿ ಸಂಪೂರ್ಣವಾಗಿದೆ. ವಾಗ್ದೇವಿಯ ಭಂಡಾರದ ಮುದ್ರೆಯನ್ನು ಒಡೆದವನು ತಾನು ಎಂದು ಹೇಳುವ ವಾಕ್ಯವು ಒಣ ಹೆಮ್ಮೆಯಲ್ಲ. ಆಳವಾದ ಅಭ್ಯಾಸ ದಿಂದ ಸರಸ್ವತಿಯನ್ನು ಸಂಪೂರ್ಣ ಒಲಿಸಿಕೊಂಡ ಶ್ರೇಷ್ಠಕವಿ ಅವನು. ತಾನು

ಅಜಿತಸೇನಾಚಾರ್ಯರಂಥ ಆಚಾರ್ಯರ ಹತ್ತಿರ ಅಭ್ಯಾಸಮಾಡಿ, ನೇಮಿ:-ಚಂದ್ರ ಸಿದ್ಧಾಂತ ಚಕ್ರವರ್ತಿಯವರಕೂಡ ಧಾರ್ಮಿಕ ಚರ್ಚೆಯಲ್ಲಿ ವೇಳೆಗಳೆದು, ಶ್ರವಣಬೆಳಗೊಳಕ್ಕೆ ಹೋಗಿ ಬಂಡೆಗಲ್ಲಿನಮೇಲೆ ತನ್ನ ಹೆಸರನ್ನು ಅಂಕಿತ ಮಾಡುವ ಅತ್ಮವಿಶ್ವಾಸವು ರನ್ನನಂಥ ಉದ್ದಾಮ ಕವಿಪಂಡಿತನಿಗೆ ಮಾತ್ರ ಶೋಭಿಸುವ ಮಾತಾಗಿದೆ. ಕವಿ, ಪಂಡಿತರಿಗೆ ರಾಜಾಶ್ರಯವು ಬೇಕೇಬೇಕು. ತನ್ನ ಆಶ್ರಯದಾತರಿಗೆ ಕೃತಜ್ಞತೆಯನ್ನು ತೋರಿಸುವ ವಿನಯಗುಣವು ರನ್ನನಲ್ಲಿ ಕಂಡುಬರುತ್ತದೆ. ದಾರಿದ್ರ್ಯದೋಷದಿಂದ ಗುಣರಾಶಿಯು ನಷ್ಟ-ವಾಗುವದೆಂಬ ಉಕ್ತಿಯನ್ನು ನೆನಪಿನಲ್ಲಿಟ್ಟುಕೊಂಡು ರನ್ನನು ರಾಜರ, ಧಾರ್ಮಿಕವೃತ್ತಿಯ ಜನರ ಆಶ್ರಯವನ್ನು ಪಡೆದು ತನ್ನ ಕವಿತಾವಲ್ಲರಿಯ ವಿಸ್ತಾರಕ್ಕೆ ಪೂರ್ಣ ಅವಕಾಶವನ್ನು ದೊರಕಿಸಿಕೊಂಡನು. ಸತ್ಯಾಶ್ರಯನ ಆಶ್ರಯವನ್ನು ಪಡೆದ ರನ್ನನು ಗದಾಯುದ್ಧವನ್ನು ಬರೆದು ಋಣಮುಕ್ತನಾದನು. ಮತ್ತು ಇಂಥ ಅಮೌಲ್ಯ ಗ್ರಂಥವನ್ನು ಬರೆದು ಕನ್ನಡನಾಡಿನ ಜನರ ಮೇಲೆ ಮಹದುಪಕಾರವನ್ನು ಮಾಡಿದನು. ಗದಾಯುದ್ಧವೆಂದರೆ ವೀರರಸದ ಆಗರವು. ವೀರರಿಗೂ, ಪಂಡಿತರಿಗೂ ಸ್ಫೂರ್ತಿಯನ್ನು ಕೊಡುವ ಕಾವ್ಯವು. ಸತ್ಯಾಶ್ರಯನ ಸಾಹಸ ಪರಾಕ್ರಮಗಳನ್ನು ರನ್ನನು ಕಣ್ಣಾರೆ ಕಂಡವನು. ಅವನ್ನೆಲ್ಲ ಕಾವ್ಯರೂಪದಲ್ಲಿ ನಮ್ಮೆಲ್ಲರ ಮುಂದೆ ಇಟ್ಟು ಕನ್ನಡ ಭಾಷೆಗೊಂದು ಹೊಸ ಒಪ್ಪ ಹಾಕಿರುತ್ತಾನೆ. ಆತನು ಬರೆದ ಪರಶುರಾಮನ ಚರಿತವು ನಮಗೆ ದೊರೆಯುವದಿಲ್ಲ. ಕದಾಚಿತ್ ಈ ಗ್ರಂಥದಲ್ಲಿ ತನಗೆ ವಿದ್ಯಾಭ್ಯಾಸದ ಏರ್ಪಾಟು ಮಾಡಿಕೊಟ್ಟ ಸಮರ ಪರಶುರಾಮನಾದ ಚಾಮುಂಡರಾಯನ ಚರಿತವೇ ಇದ್ದಿರಬಹುದು. ಈ ಗ್ರಂಥದಲ್ಲಿ ಚಾಮುಂಡರಾಯನ ಉಪಕಾರವನ್ನು ತೀರಿಸಿರಬಹುದು. ಅಜಿತನಾಥಪುರಾಣವೆಂದರೆ ರನ್ನನ ಧಾರ್ಮಿಕ ಪ್ರವೃತ್ತಿಯ ಪ್ರತ್ಯಕ್ಷ ಪ್ರವಾಹವೇ ಸರಿ. ಅಜಿತನಾಥನ ಚರಿತ್ರೆಯನ್ನು ಬರೆದಿದ್ದರಿಂದ ಒಂದು ವಿಧ ಅಜಿತಸೇನಾಚಾರ್ಯರ ಉಪಕಾರವನ್ನೂ ತೀರಿಸಿದಂತಾಯ್ತು. ಇದನ್ನು ಬರೆಯಲು ದಾನಚಿಂತಾಮಣಿಯಾದ ಅತ್ತಿಮಬ್ಬೆಯ ಆಶ್ರಯವು ರನ್ನನಿಗೆ ದೊರೆತಿತ್ತು. ತಾನುಂಡ ಉಪಕಾರವನ್ನು ಮರೆಯದಂಥ ಉದಾರಗುಣವು ರನ್ನನ ರಕ್ತದಲ್ಲಿ ಇಳಿದುಬಂದಂತೆ ಕಾಣುತ್ತದೆ. ರನ್ನನು ಕುಟುಂಬವತ್ಸಲನು. ತನ್ನ ಮಗನಿಗೆ ರಾಯನೆಂದೂ, ತನ್ನ ಮಗಳಿಗೆ ಅತ್ತಿ-

ಮಬ್ಬೆಯೆಂದೂ ಹೆಸರಿಟ್ಟು, ಅವರ ಹೆಸರುಗಳ ಮೂಲಕ ಪ್ರತಿದಿನ ಮನೆಯಲ್ಲಿ ಚಾಮುಂಡರಾಯ ಮತ್ತು ದಾನಚಿಂತಾಮಣಿ ಅತ್ತಿಮಬ್ಬೆಯ ಪುಣ್ಯಸ್ಮರಣೆಯನ್ನು ಅವನು ಮಾಡುತ್ತಿರಬಹುದು. ತನ್ನೆರಡು ಗ್ರಂಥಗಳನ್ನು ತನ್ನ ಮಕ್ಕಳಿಗೆ ಅಂಕಿತಮಾಡಿದ್ದು ರನ್ನನ ರಸಿಕತೆ, ಔದಾರ್ಯದ ಪ್ರತೀಕವಾಗಿದೆ. ಅಜಿತನಾಥ ಪುರಾಣವು ಶಾಂತರಸಪ್ರಧಾನಗ್ರಂಥ. ಮತ್ತು ಆತನ ಧಾರ್ಮಿಕ ಪ್ರವೃತ್ತಿಯ ಪ್ರತೀಕ. ತನ್ನ ಕೊನೆಯ ದಿನಗಳನ್ನು ರನ್ನನು ಧಾರ್ಮಿಕವೃತ್ತಿ-ಯಲ್ಲಿ ಕಳೆದಿರಬಹುದೆಂದು ಕಾಣುತ್ತದೆ. ವಿಪುಲವಾದ ಸನ್ಮಾನ ಕೀರ್ತಿಗಳು ಜೀವಮಾನದಲ್ಲಿಯೇ ಅವನಿಗೆ ದೊರೆತವು. ಇಷ್ಟೇ ಅಲ್ಲ, ಅನಂತರದ ದೊಡ್ಡ ದೊಡ್ಡ ಕವಿಗಳೆಲ್ಲ ಅವನನ್ನು ಮುಕ್ತಕಂಠದಿಂದ ಸ್ತುತಿಸಿದ್ದಾರೆ. ಇವನ ಅಜಿತಪುರಾಣದಲ್ಲಿ ಕಂಡುಬರುವ ಕವಿತಾಶಕ್ತಿ, ಭಕ್ತಿರಸ, ಶಾಂತರಸಗಳು ಜೀವನದ ಚಿರಂತನ ಮೂಲ್ಯಗಳಾಗಿ ಇಂದಿಗೂ ನಮ್ಮ ಆದರ್ಶಗಳಾಗಿವೆ. ಚಾಮುಂಡರಾಯ, ಸತ್ಯಾಶ್ರಯ ಮತ್ತು ಅತ್ತಿಮಬ್ಬೆ ಇವರು ರನ್ನನ ಮೇಲೆ ಉಪಕಾರವನ್ನು ಮಾಡಿದಂತೆಯೇ ತನ್ನ ಕಾವ್ಯ-ಕೃತಿಗಳಿಂದ ಕನ್ನಡಭಾಷೆಯ ಮೇಲೆ, ಕನ್ನಡನಾಡಿನ ಮೇಲೆ ಮಹದುಪಕಾರವನ್ನು ಮಾಡಿ ತನ್ನ ಹೆಸರನ್ನು ಅಜರಾಮರ ಮಾಡಿದ್ದಾನೆ ರನ್ನ. ರನ್ನನು ನಿಜವಾಗಿ ಕವಿರತ್ನ. ಅವನ ವರ್ಣನೆಯನ್ನು ಅವನ ಶಬ್ದಗಳಲ್ಲಿಯೇ ಮಾಡುವದು ತುಂಬ ಉಚಿತ.

ಕವಿಮುಖಚಂದ್ರಂ ಕವಿ ಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ ।
ಕವಿಜನ ಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ॥

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ ।
ಮಸುಳಿಸಿದನೊ ಬಹುರತ್ನಾ
ವಸುಂಧರಾಯೆಂಬ ವಾಕ್ಯಮಂ ಕವಿರತ್ನಂ ॥

---

# ಅಜಿತನಾಥ ಪುರಾಣ

ಕನ್ನಡಸಾಹಿತ್ಯದಲ್ಲಿ ಜೈನಪುರಾಣಗಳಂ ಒಂದು ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿವೆ. ತೀರ್ಥಂಕರರು, ಚಕ್ರವರ್ತಿಗಳು, ಮಹಾಪುರುಷರು ಮೊದಲಾದ ಪುಣ್ಯಜೀವಿಗಳ ಜೀವನಚರಿತ್ರೆಗಳು ಈ ಪುರಾಣಗಳಿಗೆ ಕಥಾ ವಸ್ತುಗಳಾಗಿವೆ. ಕಥೆಗಳನ್ನು ಬೆಳೆಸಿಕೊಂಡು ಬರುತ್ತಲೇ ಅವಕಾಶ ದೊರೆತಾಗಲೆಲ್ಲ ಜೈನಮತ ತತ್ವಗಳನ್ನು ತುಂಬಿ, ಜೈನಕವಿಗಳು ಮತಪ್ರಸಾರಕ್ಕೆ ಕೈಹಾಕಿದುದು ಕಂಡುಬರುತ್ತದೆ. ಕನ್ನಡದಲ್ಲಿ ಕಟ್ಟುನಿಟ್ಟಾಗಿ ಮೊದಲು ಜೈನ ಪುರಾಣವನ್ನು ರಚಿಸಿದವ ಕವಿ ಪಂಪ. 'ಆದಿಪುರಾಣ'ವನ್ನು ರಚಿಸಿ ಮುಂಬಂದ ಪುರಾಣಕವಿಗಳಿಗೆ ಹಾದಿಯನ್ನು ಹಾಕಿ ಕೊಟ್ಟಿದ್ದಾನೆ ನಾಡೋಜ ಪಂಪ. ಇವನ ಪುರಾಣಮಾರ್ಗದಲ್ಲಿಯೇ ನಡೆದು ಬಂದು ಪೊನ್ನ, ರನ್ನ, ಜನ್ನ ಮೊದಲಾದ ಜೈನಕವಿಗಳು ಪುರಾಣಕರ್ತೃಗಳೆನಿಸಿಕೊಂಡರು. ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ ಮತ್ತು ರನ್ನನ ಅಜಿತನಾಥಪುರಾಣ ಗಳಂತೂ ಮೇಲ್ಮಟ್ಟದ ಪುರಾಣಕಾವ್ಯಗಳೆಂದು ಕವಿರತ್ನನೇ ತಿಳಿಸಿದ್ದಾನೆ :

ಜಗದೊಳಗಾದಿ ಪುರಾಣಂ
ನೆಗಟ್ದುದು ಮುಂ ಪಂಪನಿಂದೆ ಪೊನ್ನಿಗನಿಂದಂ ।
ನೆಗಟ್ದುದು ಶಾಂತಿಪುರಾಣಂ
ನೆಗಟ್ದುದು ಕವಿರತ್ನನಿಂದಮಜಿತಪುರಾಣಂ ॥

ಉಪಮಾತೀತಮೆನಿಪ್ಪಾ
ದಿಪುರಾಣದ ರೇಖೆಗಂ ಬರಲ್ ನೆಱೆಗುಮೆ ಶಾಂ ।
ತಿಪುರಾಣದ ರೇಖೆಗಮಜಿ
ತಪುರಾಣದ ರೇಖೆಗಂ ಪುರಾಣದ ಕೃತಿಗಳ್ ॥

ಇಂತಹ ಉದ್ದಾಮ ಪುರಾಣಗಳನ್ನು ರಚಿಸಿದ ಈ ಕವಿಗಳು ಕವಿಗಳಲ್ಲಿಯೇ ರತ್ನತ್ರಯರೆನಿಸಿಕೊಂಡರು; ಜಿನಸಮಯದೀಪಕರಾಗಿ ಮೆರೆದರು. ಪಂಪನ ಆದಿಪುರಾಣ ಜೈನಪುರಾಣಗಳಿಗೆ ಆದಿಯಾಗಿ 'ಹಿಂದಿಲ್ಲ ಮುಂದಿಲ್ಲ' ಎನಿಸಿ ಕೊಂಡಿರಬೇಕು. ಅದನ್ನು ಮೀರಿಸುವಂತೆ ಬರೆಯಲೆತ್ನಿಸಿದ ಪೊನ್ನನು ತನ್ನ ಶಾಂತಿಪುರಾಣವನ್ನು 'ಪುರಾಣಚೂಡಾಮಣಿ'ಯೆಂದು ಹೆಸರಿಸಿದನು. ಸ್ವಾಭಿ-ಮಾನಧನನಾದ ರನ್ನನು ತನ್ನ ಅಜಿತನಾಥಪುರಾಣವನ್ನು 'ಪುರಾಣತಿಲಕ' ವೆಂದು ಕರೆದನು. ಏನೇ ಆದರೂ ಪಂಪನ ಆದಿಪುರಾಣವು 'ಉಪಮಾನ' ವಾಗಿ, ಅಳತೆಯ ಮಾನದಂಡವಾಗಿ ನಿಂತುದೇನೂ ಸುಳ್ಳಲ್ಲ. ಪಂಪನಷ್ಟೇ ತಾನೂ ದೊಡ್ಡವನೆಂದು ರನ್ನಕವಿಯ ಹೆಮ್ಮೆ.

ಸುಭಗಕವಿ ಪಂಪನಿಂ ವಾ
ಗ್ವಿಭವೋನ್ನತಿ ನೆಗಟ್ದುದವನ ಗುಣಗಣನೆಯೊಳಿಸೆದಿ ।
ದುರ್ಭಯಕವಿಚಕ್ರವರ್ತಿಗ
ಮಭಿನವ ಕವಿಚಕ್ರವರ್ತಿಗಂ ದೊರೆಯೊಳರೇ ॥

ಪಂಪ, ರನ್ನ ಇವರಿಬ್ಬರೇ ದೊಡ್ಡವರಂತೆ ! ಇವರಿಬ್ಬರನ್ನು ಹೋಲಿಸಬೇಕಾ ದರೆ ಮತ್ತೊಬ್ಬ ಕವಿ ಇಲ್ಲ. ಪಂಪನಂತೆ ರನ್ನ; ರನ್ನನಂತೆ ಪಂಪ. ಹೀಗಾಗಿ ರನ್ನನ ದೃಷ್ಟಿಯಲ್ಲಿ ಪೊನ್ನ ಸುಳಿಯಲೇ ಇಲ್ಲ :

ಕವಿಗಳವರಿರ್ವರೇ ಪು
ಣ್ಯವಂತರಿರ್ವರೆ ಕೃತಾರ್ಥರಿರ್ವರೆ ಸುಭಗರ್ ।
ಕವಿತಾಗುಣಾರ್ಣವಂ ಮೇಣ್
ಕವಿರತ್ನಂ ಮೇಣ್ ಗುಣಕ್ಕೆ ಮಚ್ಚರಮುಂಟೇ ॥

ಆದಿಪುರಾಣವನ್ನು ಬರೆದು ಪಂಪಕವಿ ದ್ವಿಜವಂಶಧ್ವಜನೆನಿಸಿಕೊಂಡ. ಅಜಿತನಾಥ ಪುರಾಣವನ್ನು ಬರೆದ ರನ್ನಕವಿ ವೈಶ್ಯಧ್ವಜನೆನಿಸಿಕೊಂಡ. ಎಲ್ಲಂದ ದಿಂದಲೂ ತಾನು ಪಂಪನಿಗೆ ಸರಿಸಮಾನನೆಂದು ಬಗೆದ ರನ್ನನು ಮೊದಲೇ ಸ್ವಾಭಿಮಾನಿ; ಕವಿಚಕ್ರವರ್ತಿ ಎನ್ನುವ ಬಿರುದೂ ಅವನಿಗೆ ಅಹಂಭಾವವನ್ನು ತಾರದಿಲ್ಲ. ಆದುದರಿಂದಲೇ ಆದಿಪುರಾಣಕ್ಕಿಂತಲೂ ತನ್ನ ಅಜಿತಪುರಾಣ ಒಂದು ಕೈ ಮೇಲೆಂದೇ ಹೇಳಿಕೊಂಡಿರಲು ಸಾಕು :

ಎನಿತೊಳವು ಮನದ ಸಂದೆಯ
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ ।
ಪ್ಪನುರಾಗಮೊದವುಗುಂ ರ
ತನ್ನ ಪೇಟ್ದ ಜಿತನ ಪುರಾಣಮಂ ಕೇಳಲೊಡಂ ॥

ಎನಿತುಂಟಾಗಮವರ್ಣನ
ಮನಿತುಮನೊಳಕೊಂಡು ಸಕಲಭವ್ಯಜನಂಗ ।
ಳನುರಾಗಮನೊಡರಿಸಿದಪು
ದೆನಿಪ ಪುರಾಣಂ ಪುರಾಣತಿಲಕಮಿದಲ್ತೇ ॥

'ಪುರಾಣತಿಲಕ'ವನ್ನು ಓದಿದರೆ ಮನದಲ್ಲುಳಿದ ಸಂದೇಹಗಳು ತೊಲಗಿ ಧರ್ಮ ದಲ್ಲಿ ಸ್ವಾಭಾವಿಕವಾಗಿ ಅನುರಾಗ ಉಂಟಾಗುವುದೆಂದು ರನ್ನನ ಅಭಿಪ್ರಾಯ. ಜೈನ ಪುರಾಣಗಳಲ್ಲಿ ಬರಲೇಬೇಕಾದ ಎಲ್ಲ ಆಗಮವರ್ಣನೆಗಳು ತನ್ನ ಪುರಾಣದಲ್ಲಿ ಬಂದಿವೆಯೆಂದು ರನ್ನ ಹೇಳಿಕೊಳ್ಳುತ್ತಾನೆ. ಈ ಮಾತಿನ ಸತ್ಯಾಂಶವನ್ನು ಅರಿಯಬೇಕಾದರೆ ಅವನ ಪುರಾಣದ ಸಾರವನ್ನು ಮೊದಲು ಅರಿಯಬೇಕಾದುದು ಅಗತ್ಯ. ಕಾವ್ಯವನ್ನು ಓದದೆ, ನಿಜಾಂಶವನ್ನು ತಿಳಿಯದೆ ಅನ್ಯರ ಹೇಳಿಕೆಯನ್ನು ಒಪ್ಪುವುದು ಸರಿಯಾದೀತೇ ?

ರನ್ನಕವಿ ಅಜಿತನಾಥಪುರಾಣದ ಪ್ರಾರಂಭದಲ್ಲಿ ತನ್ನ ಇಷ್ಟ ದೇವತೆ ಯನ್ನು ಸ್ಮರಿಸಿ, ಗುರುಗಳಿಗೆ ನಮಸ್ಕಾರ ಮಾಡುತ್ತಾನೆ. ಈ ಗ್ರಂಥವನ್ನು ಬರೆಯಿಸಲು ಕಾರಣಳಾದ ದಾನಚಿಂತಾಮಣಿ ಅತ್ತಿಮಬ್ಬೆಯ ವಂಶಪರಂಪರೆ ಯನ್ನೂ ಆಕೆಯ ಗುಣಾತಿಶಯವನ್ನೂ ಮನವಾರೆ ಹೊಗಳುತ್ತಾನೆ. ನಂತರ ಅಜಿತಸ್ವಾಮಿಯ ಪುಣ್ಯಪುರಾಣವನ್ನು ಬಣ್ಣಿಸುವ ಪ್ರತಿಜ್ಞೆಮಾಡಿ ಮುಂದೆ ಸಾಗುತ್ತಾನೆ.

ಅಜಿತನಾಥ ಪುರಾಣಕ್ಕೆ ಅಜಿತಸ್ವಾಮಿಯೇ ಕಥಾನಾಯಕ; ಅವರ ಪುಣ್ಯ ಜೀವನವನ್ನು ಚಿತ್ರಿಸುವುದೇ ಕವಿಯ ಗುರಿ. ಅಜಿತನಾಥನು ಸಾಮಾನ್ಯ ವ್ಯಕ್ತಿಯಲ್ಲ— ಜಿತಮನೋಜಾತಾಜಿತಸ್ವಾಮಿ :

ಶ್ರೀಮದಮರೇಂದ್ರರುಂದ್ರ ಶಿ-
ಖಾಮಣಿ ಮಾಲಾರ್ಚಿತಾಂಘ್ರಿ ಭುವನತ್ರಯ ಚೂ।
ಡಾಮಣಿಯೆನೆ ವೆಗಟ್ದಜಿತ
ಸ್ವಾಮಿಯ ಜಿನಪತಿಯ ಚರಿತಮಪಗತದುರಿತಂ ॥

ಭರತಭೂಮಿಯಲ್ಲಿಯೇ ಅಯೋಧ್ಯಾದೇಶವು ಸಕಲ ಸಂಪತ್ತಿನಿಂದ ಮೆರೆಯುವ ಪ್ರದೇಶ. ಅದಕ್ಕೆ ರಾಜಧಾನಿಯಾಗಿ ಮೆರೆಯುವ ಸಾಕೇತಪುರದಲ್ಲಿ ಇಕ್ಷ್ವಾಕು ವಂಶೋತ್ಪನ್ನನಾದ 'ಜಿತಶತ್ರು'ವೆಂಬ ದೊರೆ ಕ್ಷತ್ರಿಯ ಕುಲತಿಲಕನೆನಿಸಿ ರಾಜ್ಯವಾಳುತ್ತಿದ್ದನು. ಆತನ ಮನೋವಲ್ಲಭೆ ಸರ್ವ-ಗುಣಾಲಂಕೃತಳಾದ ವಿಜಯಸೇನಾದೇವಿ. ಅವರೀರ್ವರೂ ಸಕಲಭೋಗ-ಗಳನ್ನು ಅನುಭೋಗಿಸುತ್ತ ಸುಖದಿಂದ ಇರುವಾಗ, ಜಿತಶತ್ರು ಮಹಾರಾಜನು ವಿಜಿಗೀಷು ವೃತ್ತಿಯನ್ನು ಅವಲಂಬಿಸಿ, ತನ್ನ ವಿಕ್ರಮಬಲದಿಂದ ಸರ್ವಶತ್ರುಗಳನ್ನು ಗೆದ್ದು, 'ಜಿತಶತ್ರು' ಎಾಬ ಹೆಸರನ್ನು ಅನ್ವರ್ಥವನ್ನಾಗಿ ಮಾಡಿಕೊಂಡನು.

ಈ ಕಡೆಗೆ, ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀ ದೇಶದ ಸುಸೀಮಾ ನಗರದ ರಾಜನಾದ ವಿಮಲವಾಹನನು ಒಂದು ದಿವಸ, ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಳ್ಳುತ್ತಿರುವಾಗ ತನ್ನ ಕೆನ್ನೆಯಲ್ಲಿ ಒಂದು ನರೆಗೂದಲು ಮೂಡಿದುದನ್ನು ಕಂಡನು. ಆಗ ಅವನಲ್ಲಿ ಒಮ್ಮೆಲೇ ವೈರಾಗ್ಯ ಮೂಡುತ್ತದೆ. ಸಂಸಾರ ನಿಸ್ಸಾರವೆಂದು ಬಗೆಯುತ್ತಾನೆ. ಇಹಭೋಗವು ನರಕಕ್ಕೆ ಹೆದ್ದಾರಿ-ಯೆಂದರಿತು, ಆತ್ಮನ ಸಾರವಾದ ಜಿನಧರ್ಮಮಹಿಮೆಯನ್ನು ತಿಳಿದುಕೊಳ್ಳು-ತ್ತಾನೆ. ಮುಂದೇನು ಮಾಡುವುದು ?

ಬರವೇಟ್ದಾತ್ಮೀಯ ಮಂತ್ರಿಪ್ರಮುಖರನವರೊಳ್ ನಿಶ್ಚಯಂಗೆಯ್ದು ಧಾತ್ರೀ
ಭರಮಂ ಕೊಟ್ಟಾತ್ಮಜನ್ಮಂಗಧಿಕ ವಿಭವದಿಂ ಪಟ್ಟಮಂ ಕಟ್ಟಿ ದೀಕ್ಷಾ।
ಭರಮಂ ಕೆಯ್ಕೊಂಡು ಗೆಲ್ಲಂಗೊಳಲೆ ಬಗೆದನುತ್ಸಾಹದಿಂ ಜೈನಧರ್ಮೋ
ದ್ಧರಣಮಂ ಭವ್ಯಾಬ್ಜಮಿತ್ರಂ ವಿನಯನಿಧಿ ಸುಹೃದ್ವತ್ಸಲಂ ವತ್ಸನಾಭಂ॥

ವಿಮಲವಾಹನನು ತನ್ನ ಮಗನಿಗೆ ರಾಜ್ಯಭಾರವನ್ನಿತ್ತು, ಜಿನದೀಕ್ಷೆಯನ್ನು ವಹಿಸಿ ತಪಸ್ಸಿಗೆ ಹೋದನು. ಉಗ್ರತಪಸ್ಸನ್ನಾಚರಿಸಿ ತೀರ್ಥಂಕರ ಪದವಿಗೆ ಕಾರಣವೆನಿಸಿದ ದರ್ಶನಶುದ್ಧಿ, ವಿನಯಸಂಪನ್ನತೆ ಮೊದಲಾದ ಷೋಡಶ ಭಾವನೆಗಳನ್ನು ಭಾವಿಸಿ, ಕಾಲಾಂತರದಲ್ಲಿ ಸಮಾಧಿಮರಣದಿಂದ ಶರೀರವನ್ನು ಪರಿತ್ಯಾಗಮಾಡಿ, ಸ್ವರ್ಗದಲ್ಲಿ ವಿಜಯವೆಂಬ ವಿಮಾನದಲ್ಲಿ ಅಹಮೇಂದ್ರದೇವನಾಗಿ ಹುಟ್ಟಿದನು. ಅಲ್ಲಿ ಬಹುಕಾಲದವರೆಗೆ ಅಣಿಮಾದಿ ಅಷ್ಟೈಶ್ವರ್ಯವನ್ನು ಅನುಭೋಗಿಸುತ್ತ ಸುಖದಿಂದಿರಲು ಆ ದೇವಾಯುಷ್ಯವು ಪೂರ್ಣವಾಯಿತು. ಆಗ ಅವನು ಅಲ್ಲಿಂದ ಬಿಡುಗಡೆ ಹೊಂದಿ ಅಯೋಧ್ಯಾನಗರದ ಜಿತಶತ್ರು ಮಹಾರಾಜನ ಪಟ್ಟಮಹಿಷಿ, ವಿಜಯಸೇನಾದೇವಿಯ ಗರ್ಭಕ್ಕವತರಿಸುವನು.

ಲೋಕೈಕ ಸುಂದರಿಯೆನಿಸಿದ ವಿಜಯಸೇನಾದೇವಿಯ ಗರ್ಭಕ್ಕೆ ಅಜಿತತೀರ್ಥೇಶ್ವರನು ಅವತರಿಸುವ ಪೂರ್ವದಲ್ಲಿಯೇ ದೇವೇಂದ್ರನು ದೇವಾಂಗನೆಯರಿಂದ ಅವಳ ಗರ್ಭವನ್ನು ಶುದ್ಧಿಗೊಳಿಸಿದ್ದನು; ಗರ್ಭಕ್ಕೆ ಅವತರಿಸಿದ ಮೇಲೆ ವಾದ್ಯಗೀತ, ನಾಟ್ಯ ಮೊದಲಾದ ವಿವಿಧವಿನೋದಗಳಿಂದ ಗರ್ಭಾವತರಣ ಕಲ್ಯಾಣವನ್ನು ಜರುಗಿಸಿದನು. ಆ ಪುಣ್ಯಮೂರ್ತಿಯು ಆ ಮಹಾತಾಯಿಯ ಗರ್ಭಪ್ರವೇಶ ಮಾಡುತ್ತಿದ್ದಾಗ ವೇಳೆ ಬೆಳಗಿನ ಜಾವವಾಗಿತ್ತು. ವಿಜಯ ಸೇನಾದೇವಿ ವೈಢೂರ್ಯ ಪರ್ಯಂಕದಲ್ಲಿ ಪವಡಿಸಿದ್ದಳು. ಅವಳು ಆಗ ಹದಿನಾರು ಶುಭಸ್ವಪ್ನಗಳನ್ನು ಕಂಡು ನಿದ್ರೆ ತಿಳಿದೆದ್ದು, ತನ್ನ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ತನ್ನ ಪತಿಯ ಬಳಿಗೆ ಬಂದು, ತನ್ನ ಸ್ವಪ್ನದರ್ಶನ ವೃತ್ತಾಂತವನ್ನು ತಿಳಿಸುವಳು. ಆ ಶುಭಸ್ವಪ್ನಗಳ ಫಲವನ್ನು ತಿಳಿದ ಮಹಾರಾಜನು :

ಕುಳತಿಳಕಂ ಜಗತೀತಳ
ತಿಳಕಂ ತಾಂ ನಮಗೆ ತನಯನಾಗಲ್ ಬಗೆದಂ ।
ಬೆಳಗುಗುಮಾತಂ ನಮ್ಮಯ
ಕುಳಮಂ ಶ್ರೀ ಜೈನಧರ್ಮಮಂ ಪ್ರಿಯದಯಿತೇ ॥

ಎಂದು ತಿಳಿಸಿ ಹೇಳುವನು. ಆಗ ವಿಜಯಸೇನಾದೇವಿಗೆ ಆದ ಹರ್ಷ ಅನುಪಮವಾದುದು !

ಉದರದೊಳಿರ್ದ ತನೂಜನ
ವದನೇಂದುದ್ಯುತಿಯೆ ಮಾಡೆ ಲಾವಣ್ಯಸಮು।
ದ್ರದ ಪೆರ್ಚನರಸಿ ಲಾವ
ಣ್ಯದ ಪುಣ್ಯದ ಪರಮಪದಮನೇನೆಯ್ದಿದಳೋ ॥

ಅವಳು ಆನಂದತುಂದಿಲಳಾಗಿ, ಪ್ರತಿನಿತ್ಯದಲ್ಲಿ ಜಿನಧರ್ಮಪಾಲನೆ ಮಾಡು ತ್ತಿರಲು ನವಮಾಸ ತುಂಬಿತು. ಶುಭಮುಹೂರ್ತದಲ್ಲಿ ಅಜಿತತೀರ್ಥೇಶ್ವರನ ಜನನವಾಯಿತು :

ಕೃತಭವ್ಯೋತ್ಸವ ಮಾಘಶುದ್ಧ ದಶಮಿ ಪುಣ್ಯಾಹಯುಕ್ತಂ ಪ್ರಜಾ
ಪತಿಯೋಗಂ ಪೆರೆದಂದು ರೋಹಿಣಿಯೊಳಿಂದ್ರಾನಂದತೂರ್ಯಂ ಸರಿ।
ತ್ಪತಿಘೋಪಕ್ಕೆಣೆಯಾಗೆ ಭೋರ್ಗರೆಯೆ ಸಂದಿಕ್ಷ್ವಾಕು ವಂಶೋದಯೋ
ನ್ನತ ಶೈಲಾಗ್ರದೊಳಾದುದಂದಜಿತತೀರ್ಥೇಶಾಬ್ಜ ಮಿತ್ರೋದಯಂ ॥

ಆಗ ಜನನೀಜನಕರಿಗೆ, ಭಕ್ತಾಳಿಗೆ, ಲೋಕಕ್ಕೆ ಆನಂದ ಉಕ್ಕೇರುವದು. ಮಗುವನ್ನು ಪಡೆದ ವಿಜಯಸೇನಾದೇವಿಯಂತೂ ಪುಳಕಿತಳಾಗುವಳು :

ಪರಮೇಶ್ವರಿ ನಿಜಸುತಮುಖ
ನಿರೀಕ್ಷಣದೊಳೊಗೆದ ಪುಳಕಂಗಳಿನೇಂ।
ಕರಮೆಸೆದಳೊ ಸುಗ್ಗಿಯೊಳಿಂ
ಕುರಿಸಿದುದೊಂದಭಿನವಾಮ್ರಲತಿಕಾಕೃತಿವೋಲ್ ॥

ಅವಳು ವಸಂತಮಾಸದಲ್ಲಿ ಚಿಗುರಿಟ್ಟ ಮಾಮರದಂತೆ ಕಂಗೊಳಿಸಿದಳಂತೆ ! ಈ ವಾರ್ತೆ ದೇವಲೋಕಕ್ಕೂ ಮುಟ್ಟುತ್ತದೆ. ಇಂದ್ರಾದಿ ದೇವತೆಗಳು ವಿಜೃಂಭಣೆಯಿಂದ ಜಿನಶಿಶುವಿದ್ದಲ್ಲಿಗೆ ಬಂದು ಭಕ್ತಿಯಿಂದ ಬಾಗುತ್ತಾರೆ. ಇಂದ್ರನ ಮಡದಿಯಾದ ಶಚಿದೇವಿ ಜಿನಜನನೀಜನಕರ್ಗೆ ಮಾಯಾನಿದ್ರೆಯಂ ಬರಿಸಿ, ಮಾಯಾಶಿಶುವಂ ಮುಂದಿರಿಸಿ, ಜಿನತೀರ್ಥೇಶ ನನ್ನು ಎತ್ತಿಕೊಂಡು ಬಂದು ದೇವೇಂದ್ರನ ಕೈಗೆ ಕೊಡುವಳು. ಆಗ ದೇವೇಂದ್ರನು :

ಎತ್ತಿ ಜಿನಶಿಶುವನಾಗಳ್
ನೆತ್ತಿಯ ಮೇಲಿಟ್ಟು ನೊಸಲ ಮೇಲಿಟ್ಟು ಸುರೇಂ ।
ದ್ರೋತ್ತಮನಿದಿರೊಳ್ ತಂದಿ
ಟ್ಟಿತ್ತಂ ಮನದಿಂದಗಲ್ಚಲಾರದೆ ಬೞಿಯಂ ॥

ಅನಿಮಿಷನಯನದೆ ನೋಟ್ಟುದು
ಮನಿಮಿಷಪತಿ ಲೀಲೆಯಿಂದರಲ್ಚಿದುವಾಗಳ್ ।
ಜಿನಪತಿ ವಕ್ತ್ರೇಂದು ಸಹ-
ಸ್ರನೇತ್ರಲೋಚನಸಹಸ್ರಕುವಲಯವನಮಂ ॥

ಆ ಸಮಯದಲ್ಲಿ,

ಜಿನಮುಖಕಮಳ ವಿಲೋಕನ
ಜನಿತೋತ್ಸವ ದಿವಿಜಮುಖಗುಹಾಮುಖದಿಂ ಮಾ ।
ರ್ದನಿಯೆನೆ ಪೊಱಮಟ್ಟವು ನಂ
ದನಂದ ಜಯಜಯರವಂಗಳತಿ ಮಧುರಂಗಳ್ ॥

ಆಮೇಲೆ, ದೇವೇಂದ್ರನು ತನ್ನ ಐರಾವತದ ಮೇಲೆ ಜಿನಶಿಶುವನ್ನು ಕೂಡ್ರಿಸಿ ಸಕಲ ಪರಿವಾರದೊಡನೆ ಮೆರೆವಣಿಗೆ ತೆಗೆದುಕೊಂಡು ನಡೆದು ಮೇರುಪರ್ವತದ ಶಿಖರದ ಮೇಲೆ ಶಿಶುವನ್ನು ಕೂಡ್ರಿಸಿ ಸ್ವರ್ಣಕುಂಭದಲ್ಲಿರುವ ಕ್ಷೀರಜಲದಿಂದ ಜನ್ಮಾಭಿಷೇಕವನ್ನು ನೆರವೇರಿಸಿದನು. ರನ್ನನು ವರ್ಣಿಸಿದ ಜನ್ಮಾಭಿಷೇಕ ಸನ್ನಿವೇಶ ಬಹು ರಮ್ಯವಾಗಿದೆ, ಹೃದಯಂಗಮವಾಗಿದೆ.

ತದನಂತರ, ದೇವೇಂದ್ರನು ಮಹಾವೈಭವದಿಂದ ಅಜಿತ ಮಹಾಸ್ವಾಮಿ-ಯನ್ನು ಅಯೋಧ್ಯೆಗೆ ತಂದು, ಶಿಶುವನ್ನು ತಂದೆ-ತಾಯಿಗಳಿಗೊಪ್ಪಿಸಿ ಆನಂದ-ನೃತ್ಯ ಮಾಡುತ್ತಾನೆ. ಅಜಿತಸ್ವಾಮಿಯ ಸೇವೆಗಾಗಿ ದೇವಕುಮಾರರನ್ನು ನಿಯೋಗಿಗಳನ್ನಾಗಿ ನಿಯಮಿಸಿ ಹರ್ಷದಿಂದ ಸ್ವಸ್ಥಾನಕ್ಕೆ ತೆರಳುವನು.

ಅಜಿತತೀರ್ಥೇಶನ ಬಾಲ್ಯಕಳೆದು ಯೌವನ ತಲೆದೋರುತ್ತದೆ. ಸಹಸ್ರ ಕನ್ಯೆಯರು ಅವನ ಕೈಹಿಡಿಯುತ್ತಾರೆ. ಮದುವೆಯನ್ನು ವಿಜೃಂಭಣೆಯಿಂದ ಜರುಗಿಸಿ ಜಿತಶತ್ರು ಮಹಾರಾಜನು ಪುತ್ರನಿಗೆ ರಾಜ್ಯವನ್ನು ವಹಿಸಿಕೊಟ್ಟು

ವಿಶ್ರಾಂತಿ ಸುಖವನ್ನು ಅನುಭೋಗಿಸುವನು. ಅಜಿತಸ್ವಾಮಿಗೆ ವಿವಾಹೋತ್ಸವ ಮತ್ತು ರಾಜ್ಯಾಭಿಕೋತ್ಸವ ಒಂದಾದೊಡನೆ ಒಂದಾಗಿ ನಡೆದವು. ಈ ಸಮಯದಲ್ಲಿಯೇ ವಸಂತಋತು ಆಗಮಿಸುತ್ತದೆ. ಕವಿಯ ವರ್ಣನೆಗೆ ಚಿಗುರಿಡುತ್ತದೆ. ಕವಿಗೆ ಸ್ವಾತಂತ್ರ್ಯ ದೊರೆಯುತ್ತದೆ. ಆ ವರ್ಣನೆಯನ್ನು ರನ್ನನ ಬಾಯಿಯಿಂದಲೇ ಕೇಳುವುದು ಉಚಿತ.

ಕಾಲಾನಂತರದಲ್ಲಿ ಅಜಿತಸ್ವಾಮಿಗೆ ಅಜಿತಸೇನನೆಂಬ ಪುತ್ರರತ್ನವೊಂದು ಜನಿಸಿ, ಬೆಳೆದು ದೊಡ್ಡದಾಗುತ್ತದೆ. ಒಂದು ದಿನ, ಅಜಿತ ತೀರ್ಥೇಶ್ವರನು ಸುರ್ಯೋದಯ, ಚಂದ್ರೋದಯಗಳ ಸುಖವನ್ನು ಏಕಕಾಲದಲ್ಲಿಯೇ ಅನುಭವಿಸುತ್ತಿದ್ದಾಗ ನಭಸ್ಥಳದಿಂದ ಉಲ್ಕಾಪಾತವಾದುದು ಕಣ್ಣಿಗೆ ಬೀಳುವುದು. ಅದರ ಶುಭಾಶುಭವನ್ನು ಅರಿತ ಅಜಿತ ಮಹಾಸ್ವಾಮಿಗೆ ಸಂಸಾರ ಹೇಯವೆನಿಸುವುದು. ಅವನ ಮನದಲ್ಲಿ ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಅಶುಚಿತ್ವ, ಸಂಸಾರ, ಲೋಕ, ಆಸ್ರವ, ಸಂವರನಿರ್ಜರಾ, ಬೋಧಿದುರ್ಲಭ, ಧರ್ಮಸ್ವಾಖ್ಯಾತತ್ವಗಳೆಂಬ ಹನ್ನೆರಡು ಅನುಪ್ರೇಕ್ಷ ಭಾವನೆಗಳು ಯಥಾಕ್ರಮದಿಂದ ಮೂಡಿಹೋಗುವವು. ವೈರಾಗ್ಯಭಾವ ಬೇರೂರಿ ನಿಲ್ಲುವದು. ತನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿಸಿ ಅಜಿತಸ್ವಾಮಿ ದೀಕ್ಷೆಗೊಳ್ಳುತ್ತಾನೆ. ಮಹಾತಪಸ್ಸನ್ನಾಚರಿಸಲು ಸಹೇತುಕವೆಂಬ ವನಕ್ಕೆ ತೆರಳುತ್ತಾನೆ. ಅಂತಃಪುರ ಸ್ತ್ರೀಯರ ಗೋಳು ಹೇಳತೀರದು. ಅವನು ಮಮತೆಯ ಕಟ್ಟಿಗೆ ಬಲೆಬೀಳದೆ ಮುಂದೆ ನಡೆಯುವ ಸನ್ನಿವೇಶ ಗಂಭೀರವಾಗಿದೆ, ಹೃದಯವೇದ್ಯವಾಗಿದೆ.

ಜಿನಸ್ವಾಮಿಯ ತಪಸ್ಸು ಉಗ್ರವಾದುದು. ಅವನ ತಪಃಪ್ರಭಾವಕ್ಕೆ ಒಳಗಾಗಿ ಪಶುಪಕ್ಷಿಗಳು ಸಹ ತಮ್ಮ ಸಹಜವೈರವನ್ನು ಮರೆತುಬಿಟ್ಟವೆಂದು ವರ್ಣಿಸುವ ಕವಿಯ ವರ್ಣನೆ ಸಹಜವಾಗಿದೆ, ಸುಂದರವಾಗಿದೆ:

ಕರಿಕಲಭಂಗಳ್ ಕರಿಕೇ
ಸರಿಗಳ್ ವೈರಮನೆ ಬಗೆಯದಹಿನಕುಲಂಗಳ್ ।
ಹರಿಣಚಮೂರಂಗಳ್ ಶಾಂ
ತರೂಪದಿಂದಿರ್ದುವಜಿತನಾಥನ ಕೆಲದೊಳ್ ॥

ಶಾಂತರಸವು ಈ ವರ್ಣನೆಯಲ್ಲಿ ತುತ್ತತುದಿಗೇರಿ ನಿಲ್ಲುವದು. ಅಜಿತನಾಥನ ಮಹೋಗ್ರ ತಪವನ್ನಾಚರಿಸುತ್ತ ಆತ್ಮನ ಅನಂತಜ್ಞಾನ, ದರ್ಶನಶಕ್ತಿಗಳನ್ನು ಮರೆಮಾಡಿರುವ ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯಂಗಳೆಂಬ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ ಅನಂತಜ್ಞಾನ ಗುಣವನ್ನು ಪಡೆದು ಸರ್ವಜ್ಞನಾಗುವನು. ಇಂದ್ರಾದಿ ದೇವತೆಗಳು ಅವಧಿ-ಬೋಧೆಯಿಂದ ಅಜಿತಸ್ವಾಮಿಯ ನಿಲವನ್ನು ಅರಿತುಕೊಂಡು ಧಾವಿಸಿ ದರ್ಶನ ಪಡೆಯುವರು. ದೇವೇಂದ್ರನು ಸಮವಸರಣವೆಂಬ ಮಣಿಮಯ ಮಂಟಪ ವನ್ನು ನಿರ್ಮಿಸುವನು. ಅಲ್ಲಿ ತೀರ್ಥಂಕರ ಅಜಿತನಾಥನು ಧರ್ಮತೀರ್ಥಾಧಿ-ನಾಥನಾಗಿ ಮೆರೆಯುವನು.

ತೀರ್ಥಂಕರರು ಸಾಮಾನ್ಯವಾಗಿ ಘಾತಿಕರ್ಮವನ್ನು ನಾಶಮಾಡಿಕೊಂಡು, ಹುರಿದ ಬೀಜದಂತೆ ಹುಟ್ಟುಸಾವುಗಳ ಆವರಣವನ್ನು ಕಳೆದುಕೊಂಡು ಭೂಮಿ-ಯಿಂದ ಐದುಸಾವಿರ ಧನುಷ್ಪ್ರಮಾಣ ನೆಗೆದು ಯೋಗಮುದ್ರೆಯಲ್ಲಿ ವಿರಾಜ-ಮಾನರಾಗುತ್ತಾರೆ. ದೇವಮನುಷ್ಯತಿರ್ಯಗ್ಭವ್ಯ ಜೀವಗಳಿಗೆ ಜೀವಾಜೀವಾದಿ ಸಮಸ್ತ ತತ್ವಗಳನ್ನು ಬೋಧಿಸುವರು. ಸಮವಸರಣ ಮಂಟಪವು ಬಾಹ್ಯ-ವಿಭೂತಿದ್ಯೋತಕವಾಗಿದ್ದು, ಭವ್ಯಪ್ರಾಣಿಗಳು ಧರ್ಮೋಪದೇಶವನ್ನು ಕೇಳುವ ಸಭಾಮಂಟಪವಾಗಿ ಪರಿಣಮಿಸುವದು. ಹೀಗೆ ಪ್ರತಿಯೊಬ್ಬ ತೀರ್ಥಂಕರನೂ ಸಮವಸರಣದ ಮೇಲೆ ಮಂಡಿಸಿ ಧರ್ಮೋಪದೇಶ ಮಾಡುವುದು ರೂಢಿ-ಯಾಗಿದೆ. ತೀರ್ಥವೆಂದರೆ ಧರ್ಮಬೋಧೆ. ಅಂತಹ ತೀರ್ಥವನ್ನು ಉಪದೇಶ ಮಾಡುವವರಿಗೆ ತೀರ್ಥಂಕರರೆಂದು ಹೆಸರು.

ಅಜಿತತೀರ್ಥೇಶ್ವರನು ಆ ಸಮವಸರಣ ಮಂಟಪದಲ್ಲಿ ಒಂದುಲಕ್ಷ ಪೂರ್ವಕಾಲದವರೆಗೆ ಬೋಧೆ ಮಾಡುತ್ತಿದ್ದು, ಆಯುಷ್ಯ ಒಂದು ತಿಂಗಳು ಉಳಿದಾಗ ಸಮವಸರಣವನ್ನು ಬಿಟ್ಟು ಸಮ್ಮೇದಾಚಲಕ್ಕೆ ಆಗಮಿಸುತ್ತಾರೆ. ಅಲ್ಲಿ ಪರಮಶುಕ್ಲಧ್ಯಾನವೆಂಬ ಪರಮಯೋಗ ವಿಶೇಷದಿಂದ ವೇದನೀಯ ಆಯುಷ್ಯನಾಮ ಗೋತ್ರಗಳೆಂಬ ಸೂಕ್ಷ್ಮವಾದ ಅಘಾತಿಕರ್ಮಗಳನ್ನು ನಾಶಮಾಡಿಕೊಂಡು ಚೈತ್ರ ಶುದ್ಧ ಪಂಚಮಿಯ ಪೂರ್ವಾರ್ಧದಲ್ಲಿ ಮುಕ್ತರಾಗುವರು.

'ಕೃತಮೋಹದ್ರೋಹವಿಧ್ವಂಸನನಧಿಗತಕೈವಲ್ಯಬೋಧೋದಯಂ ಸಾಧಿತ ಕರ್ಮಾರಾತಿವರ್ಗಂ ಜಯಜಯ ನಿನದಂ ತೀವೆ ದೇವೇಂದ್ರರಿಂ ದಿಕ್ತತಿಯಿಂದಂದಾನಕಂ ಭೋರ್ಗರೆವಿನಮಜಿತಸ್ವಾಮಿ ದೇವಾಧಿದೇವಂ ಕೃತಕತ್ಯಂ ಬುದ್ಧಬೋಧ್ಯಂ ಶಿವಪದಸುಖಮಂ ಪೊರ್ದಿದಂ
ಸಿದ್ಧ ಸಾಧ್ಯಂ'

ಇದಿಷ್ಟೇ ಅಜಿತತೀರ್ಥಂಕರರ ಚರಿತೆ. ಮೊತ್ತದಲ್ಲಿ ಕಿರಿದಾಗಿದ್ದರೂ ಸತ್ವದಲ್ಲಿ ಹಿರಿದಾಗಿದೆಯೆಂಬ ಮಾತೇನೋ ನಿಜ. ಆದರೆ ಪಂಪನ 'ಆದಿಪುರಾಣ'ದಲ್ಲಿ ಮತ್ತು ಪೊನ್ನನ 'ಶಾಂತಿಪುರಾಣ'ದಲ್ಲಿ ಬಂದಂತೆ ತೀರ್ಥಂಕರಚರಿತೆ ಇಲ್ಲಿ ವಿಶದವಾಗಿಲ್ಲ. ಎಲ್ಲ ಮತತತ್ವಗಳನ್ನೂ ಪ್ರಸಂಗಾನುಸಾರವಾಗಿ ರನ್ನ ಇಲ್ಲಿ ಹೇಳತೊಡಗಿಲ್ಲ. ಅವಶ್ಯಕವಾದುದನ್ನು ಬಹುರಮ್ಯವಾಗಿ ಹೇಳಿದ್ದಾನೆ. ಆದಿಪುರಾಣದ ಭವಾವಳಿಯ ಭವ್ಯಚಿತ್ರವು ಇಲ್ಲಿ ದೊರೆಯುತ್ತಿಲ್ಲ. ಅಜಿತಸ್ವಾಮಿಯ ಮೂರನೆಯ ಭವದ ಕಥೆಯನ್ನು ಮಾತ್ರ ವಿಶದವಾಗಿ ಹೇಳಿ ಮುಗಿಸಿಬಿಟ್ಟಿದ್ದಾನೆ. 'ಶಾಂತಿಪುರಾಣ'ದಲ್ಲಿ ಬಂದಂತೆ ಅನವಶ್ಯಕ ಮತತತ್ವ ವಿವರಣೆಯೂ ಇಲ್ಲಿ ಬಂದಿಲ್ಲ. ಹೀಗಾಗಿ ಕೃತಿ ಚಿಕ್ಕದಾಗಿದೆ. ಹೃದ್ಯವಾದ, ಜೀವನಸ್ಪರ್ಶಿಯಾದ ಸನ್ನಿವೇಶಗಳೂ ಪಾತ್ರಗಳೂ ಆದಿಪುರಾಣದಲ್ಲಿವೆ. ಭವಾವಳಿಯ ಕಥೆಗಳಲ್ಲಿಯೇ ಅವು ಹೆಚ್ಚು ರಮ್ಯವಾಗಿ ಬರುವದುಂಟು. ಭವಾವಳಿಯನ್ನೇ ಕೈಬಿಟ್ಟ ರನ್ನನಲ್ಲಿ ಅವು ಬಾರದಿರುವದರಿಂದ ಕಥೆ ಸಪ್ಪೆ ಸಪ್ಪೆಯೆನಿಸುತ್ತದೆ. ತೀರ್ಥಂಕರರ ಜೀವನದಲ್ಲಿ ಭವಾವಳಿಗಿಂತಲೂ ಪಂಚಕಲ್ಯಾಣವರ್ಣನೆಯು ಮಹತ್ವಪೂರ್ಣವಾದುದೆಂದು ರನ್ನ ಭಾವಿಸಿದನೋ ಏನೋ ? ಅದನ್ನು ಬಹು ಹೃದಯಂಗಮವಾಗಿ ಹೇಳಿದ್ದಾನೆ. ಸಮವಸರಣದ ವರ್ಣನೆಯನ್ನಂತೂ ಬಹುಸೂಕ್ಷ್ಮವಾಗಿ ವರ್ಣಿಸಿದ್ದಾನೆ. ಅಲ್ಲಿಯೇ ಕವಿಯ ಹಿರಿಮೆ ಅಡಗಿದೆಯೆಂಬುದನ್ನು ಓದುಗರು ಗಮನಿಸಬೇಕು. ಜಿನಶಿಶುವಿನ ಜನ್ಮಾಭಿಷೇಕ, ದೇವತೆಗಳ ನಾಟ್ಯಗೀತ, ಪರಿಷ್ಕ್ರಮಣ ಮುಂತಾದ ವರ್ಣನೆಗಳಲ್ಲಿಯೇ ರನ್ನನು ತನ್ನ ಪ್ರತಿಭಾಶಕ್ತಿಯನ್ನು ಹೆಚ್ಚಾಗಿ ಉಪಯೋಗಿಸಿದುದು ಕಂಡುಬರುತ್ತದೆ. ರನ್ನನ ಆತ್ಮೀಯತೆಯನ್ನು ಕಾವ್ಯದ ತುಂಬ ಕಾಣಬಹುದಾದರೂ ಕೃತಿ ಮಾತ್ರ ರಸವತ್ತಾಗಿ ನಿಲ್ಲುವದಿಲ್ಲ. ಅಲೌಕಿಕವರ್ಣನೆಗಳೇ ಹೆಚ್ಚು. ಕವಿಸಮಯ

ವಂತೂ ಕಾವ್ಯದೋಟಕ್ಕೆ ಬೆನ್ನು ಚಪ್ಪರಿಸುವಂತೆ ಬರುತ್ತದೆ. ವರ್ಣನೆಗೆ ರನ್ನ ಮೈಸೋತಿದ್ದಾನೆ, ಮನಸೋತಿದ್ದಾನೆ. ಹೀಗಾಗಿ ಪ್ರತಿಭೆಗಿಂತಲೂ ಒಂದ್ರು ಕೈ ಪಾಂಡಿತ್ಯವೇ ಮಿಗಿಲಾಗಿ ಬರುವದರಿಂದ ಅಜಿತತೀರ್ಥೇಶ್ವರನ ಚರಿತೆ ಕೃತಕವೆನಿಸಿ ಬಿಡುತ್ತದೆ. ಈ ಮಾತು ರನ್ನನಿಗೂ ಹೊಳೆಯಿತೋ ಏನೋ ? ಈ ಕೃತಿಗೆ ಸಗರಚಕ್ರವರ್ತಿಯ ಕಥೆಯನ್ನೂ ಆಶ್ರಯದಾತಳಾದ ಅತ್ತಿಮಬ್ಬೆಯ ಚರಿತೆಯನ್ನೂ ಜೋಡಿಸಿದ್ದಾನೆ. ಇವೆರಡೂ ಮೂಲಕಥೆಗೆ ಉಪಕಥೆಗಳಾಗಿ ಬಂದಿವೆ. ಅಲ್ಲಿ ಭಕ್ತಿಯ ಮಿಡಿತ ಮಿಗಿಲಾಗಿಡುವುದರಿಂದ ಅವೆರಡೂ ಓದುಗನ ಮನಸ್ಸನ್ನು ಸೆರೆಹಿಡಿಯುತ್ತವೆ. ಅವನ್ನೇ ಮೇಲಿಂದ ಮೇಲೆ ಓದ ಬೇಕೆನಿಸುತ್ತದೆ.

ಸಗರಚಕ್ರವರ್ತಿ ಎರಡನೆಯ ಚಕ್ರನಾಥ, ಅಜಿತಜಿನೇಶ್ವರನ ಪರಮ ಭಕ್ತ. ಆತನು ತನ್ನ ಹಿಂದಿನ ಮೂರನೆಯ ಭವದಲ್ಲಿ ಪೂರ್ವವಿದೇಹದಲ್ಲಿದ್ದ ವತ್ಸಕಾವತೀ ದೇಶಕ್ಕೆ ರಾಜಧಾನಿಯಾದ ಪೃಥ್ವೀನಗರದಲ್ಲಿ ಜಯಸೇನನೆಂಬ ಅರಸನಾಗಿದ್ದನು. ಆತನ ಪಟ್ಟಮಹಿಷಿ ವಿಜಯಸೇನೆ. ಅವರ ಉದರದಲ್ಲಿ ರತಿಷೇಣ, ಧೃತಿಷೇಣರೆಂಬ ಇಬ್ಬರು ಪುತ್ರರು ಜನಿಸಿದರು. ಹಿರಿಯ ಮಗನಾದ ರತಿಷೇಣನು ಮರಣಹೊಂದಲು ಜಯಸೇನನು ಅತಿಯಾಗಿ ದುಃಖಿಸತೊಡಗಿದನು. ರಾಜನ ಮೈದುನನಾದ ಮಹಾದುತನು ಸಂಸಾರ ಸ್ವರೂಪವನ್ನು ತಿಳಿಸಿ ಅವನ ದುಃಖವನ್ನು ಹೋಗಲಾಡಿಸುವನು. ಆಗ ರಾಜನಿಗೆ ವಿವೇಕೋದಯವಾಗುತ್ತದೆ. ಅವನು ಸಂಸಾರದಲ್ಲಿ ವಿರಕ್ತಿಯನ್ನು ತಾಳಿ ಜಿನದೀಕ್ಷೆಯನ್ನು ಸ್ವೀಕರಿಸಿ ತಪಸ್ಸನ್ನಾಚರಿಸಿ, ದೇಹವನ್ನು ನೀಗಿ ಹದಿನೈದನೆಯ ಸ್ವರ್ಗದಲ್ಲಿ ಮಹಾಬಲನೆಂಬ ದೇವನಾಗುವನು. ಮುಂದೆ ಆ ಮಹಾಬಲನೇ ಸ್ವರ್ಗದಿಂದ ಚ್ಯುತನಾಗಿ ಬಂದು ಕೌಶಲದೇಶದ ಅಯೋಧ್ಯಾಧಿಪತಿ ಸುಭದ್ರವಿಜಯನ ಉದರದಲ್ಲಿ ಜನಿಸುವನು. ಆ ರಾಜನ ಮಗನೇ ಸಗರಚಕ್ರವರ್ತಿ.

ಸಗರನು ಮಹಾಮಂಡಲೇಶ್ವರನೆಂದು ಖ್ಯಾತಿವೆತ್ತು ರಾಜ್ಯಭಾರ ಮಾಡುತ್ತಿರುವಾಗ ಆತನ ಪುಣ್ಯಬಲದಿಂದ ಅವನ ಆಯುಧಶಾಲೆಯಲ್ಲಿ ಚಕ್ರರತ್ನವು ಜನಿಸುವದು. ಅದರ ಸಹಾಯದಿಂದ ವಿಜಯಯಾತ್ರೆಯನ್ನು

ಕೈಕೊಂಡು, ಅರಿರಾಯರನ್ನು ಸದೆಬಡೆದು ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತ ವೃಷಭಾಚಲಕ್ಕೆ ಬಂದು ತನ್ನ ವಿಜಯಪ್ರಶಸ್ತಿಯನ್ನು ಬರೆಯಿಸಿ ಮುಂದು-ವರಿದು ಅಖಂಡ ದಿಗ್ವಿಜಯವನ್ನು ಪಡೆದು ಸಮ್ಮೇದಪರ್ವತಕ್ಕೆ ಬರುವನು. ಅಲ್ಲಿಯೇ ಅಜಿತನಾಥ ಸ್ವಾಮಿ ಪರಿನಿರ್ವಾಣಕಲ್ಯಾಣ ಪಡೆದನೆಂಬುದನ್ನು ತಿಳಿದು ಅದ್ವಿತೀಯ ಭಕ್ತಿಯಿಂದ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸುವನು. ತಿರುಗಿ ಅಯೋಧ್ಯೆಗೆ ಮರಳಿ ಬಂದು ದಶಾಂಗಭೋಗಗಳನ್ನು ಅನುಭವಿಸುತ್ತ ಸುಖದಿಂದ ಇರಲು ಸಗರಚಕ್ರವರ್ತಿಗೆ ಅರವತ್ತುಸಾವಿರ ಮಕ್ಕಳು ಜನಿಸುವರು. ?

ಒಮ್ಮೆ, ರಾಜನ ಪೂರ್ವಜನ್ಮದ ಪರಮ ಮಿತ್ರನಾದ ಮಣಿಕೇತು ದೇವನು ದರ್ಶನಕ್ಕೆ ಬಂದನು. ಪೂರ್ವಜನ್ಮದ ಕಥೆಯನ್ನು ತಿಳಿಸಿ ತಾವೀ-ರ್ವರೂ ಆಗ ಪರಮಮಿತ್ರರಾಗಿದ್ದುದನ್ನು ತಿಳಿಸಿದನು. ಸಗರನಿಗೆ ಅದಾವುದೂ ಹೊಳೆಯಲಿಲ್ಲ. ಆರಣ ಕಲ್ಪದಲ್ಲಿ ತಾವಿಬ್ಬರೂ ಮಾತಾಡಿ-ಕೊಂಡುದನ್ನು ಮಣಿಕೇತುದೇವನು ಎಷ್ಟು ತಿಳಿಸಿ ಹೇಳಿದರೂ ಚಕ್ರಿಗೆ ತಿಳಿಯದೇ ಹೋಯಿತು. ರಾಜ್ಯವೈಭವವು ಸಗರಚಕ್ರವರ್ತಿಗೆ ಬುದ್ಧಿಭ್ರಮೆಯನ್ನುಂಟು ಮಾಡಿತ್ತು. ಮಣಿಕೇತುದೇವನು ನಿರುಪಾಯನಾಗಿ ದಿವಿಜಲೋಕಕ್ಕೆ ಮರಳಿ-ದನು. ಅನೇಕ ಸಂವತ್ಸರಗಳು ಉರುಳಿದವು. ಮಣಿಕೇತುದೇವನು ಗೆಳೆಯನ ಮೇಲಿನ ಕಳಕಳಿಯಿಂದ ಚಾರಣ ಋಷಿಯ ರೂಪದಲ್ಲಿ ಪುನಃ ಚಕ್ರವರ್ತಿಯ ಬಳಿಗೆ ಬಂದನು. ಋಷಿವರ್ಯನಿಗೆ ಪರಮ ಆತಿಥ್ಯ ದೊರೆಯಿತು. ಚಾರಣ ಋಷಿ 'ಭವಸಾಗರದಲ್ಲಿ ಮುಳುಗಿ ಮೈಮರೆಯುವುದು ಸರಿಯಲ್ಲ; ಮುಕ್ತಿ ದಾಯಕವಾದ ಪರಮದೀಕ್ಷೆಯನ್ನು ಪಡೆಯುವುದು ಶ್ರೇಯಸ್ಕರ'ವೆಂದು ಸಗರನಿಗೆ ಬೋಧಿಸಿದನು. ಯಾವ ಬೋಧೆಯೂ ಅವನ ಮನಸ್ಸಿಗೆ ನಾಟಲಿಲ್ಲ. "ಪುತ್ರವಿಯೋಗವೊಂದೇ ಈ ಸಗರನಿಗೆ ವೈರಾಗ್ಯ ತರಬಲ್ಲು-ದಾಗಿದೆ" ಎಂದುಕೊಂಡು ಅವನು ಸ್ವಸ್ಥಾನಕ್ಕೆ ಮರಳಿದನು.

ಚಕ್ರರತ್ನದ ಸಹಾಯದಿಂದ ಸರ್ವಸ್ವವನ್ನೂ ಪಡೆಯುತ್ತಿದ್ದ ಸಗರಚಕ್ರ-ವರ್ತಿ ಮಕ್ಕಳಿಗೆ ಯಾವ ಕಾರ್ಯವನ್ನೂ ಮಾಡಲು ಹೇಳಲಿಲ್ಲ. ಕೆಲಸವಿಲ್ಲದ ಮಕ್ಕಳು ಮದೋನ್ಮತ್ತರಾಗಿ ಮನಬಂದಂತೆ ವರ್ತಿಸತೊಡಗಿದರು. ಮಕ್ಕಳ ಪೀಡೆ ಹೆಚ್ಚಾಯಿತು. ಕೊನೆಗೆ ತಂದೆಯ ಆಜ್ಞೆಯಂತೆ ಕೈಲಾಸಪರ್ವತದ

ಸುತ್ತಲೂ ಅಗಳು ಕಡಿಯತೊಡಗಿದರು. ಮಣಿಕೇತುವಿಗೆ ಸುಸಂಧಿ ದೊರೆ ಯಿತು. ವಿಷಸರ್ಪವಾಗಿ ಬಂದು ಭಗೀರಥನೊಬ್ಬನನ್ನುಳಿದು ಸರ್ವರನ್ನೂ ಕಚ್ಚಿ ಅವರನ್ನು ಹೆಣದಂತೆ ಮಲಗಿಸಿದನು. ಆಮೇಲೆ ಮಣಿಕೇತುದೇವನು ವಿಪ್ರನ ವೇಷದಲ್ಲಿ ಸಗರನ ಸಮೀಪಕ್ಕೆ ಬಂದು, 'ಅಯ್ಯೋ ನಾನೊಬ್ಬ ಬಡ ಬ್ರಾಹ್ಮಣ; ಇದ್ದೊಬ್ಬ ಮಗ ಕಾಲವಶನಾದನು. ಸಕಲ ಭೂಮಂಡಲವನ್ನು ಪಾಲಿಸುವ ದೊರೆ ನನ್ನೊಬ್ಬ ಮಗನನ್ನು ಬದುಕಿಸಲಾರನೆ ?' ಎಂದು ಅಳ ತೊಡಗಿದನು. ಆ ಭರತ ಚಕ್ರವರ್ತಿ ದ್ವಿಜವಂಶವನ್ನೇ ಸೃಷ್ಟಿಮಾಡಿದ; ಚಕ್ರವರ್ತಿಯಾದ ನೀನು ಒಬ್ಬ ಬಡಬ್ರಾಹ್ಮಣಕುಮಾರನನ್ನು ಬದುಕಿಸ ಲಾರೆಯಾ ?' ಎಂದು ಗೋಗರೆದನು. ಚಕ್ರವರ್ತಿಯ ಅಭಿಮಾನಕ್ಕೆ ಸಿಡಿ-ಲೆರಗಿದಂತಾಯಿತು. ಈ ಬ್ರಾಹ್ಮಣನ ದುಃಖವನ್ನು ಕಳೆವುದೆಂತು ? ಆಗ ರಾಜನ ಮಂತ್ರಿಯೇ ಮುಂದೆ ಬಂದು, 'ಯಾರೂ ಸಾಯದಿದ್ದ ಮನೆಯ ಹುಲ್ಲನ್ನೂ ಬೆಂಕಿಯನ್ನೂ ತಂದರೆ ನಿನ್ನ ಮಗನನ್ನು ಬದುಕಿಸಬಲ್ಲೆವು' ಎಂದು ತಿಳಿಸಿದನು. ಬ್ರಾಹ್ಮಣನು ಸ್ವಲ್ಪ ಮುಂದೆ ಹೋಗಿ ಬಂದು, 'ಅಂತಹ ಮನೆ ಎಲ್ಲಿಯೂ ಇಲ್ಲ' ವೆಂದನು. ಇದೇ ವೇಳೆಗೆ ಭಗೀರಥನು ತನ್ನ ಸಹೋದರ ರೆಲ್ಲರೂ ಮಡಿದ ವಾರ್ತೆಯನ್ನು ತಂದು ತನ್ನ ತಂದೆಗೆ ತಿಳಿಸಿದನು. ಅಂತಃ-ಪುರದ ರಾಣಿಯರೆಲ್ಲರೂ ಗೋಳೋ ಎಂದು ಅಳುತ್ತ ಪುತ್ರರನ್ನು ಉಳಿಸ-ಬೇಕೆಂದು ರಾಜನನ್ನು ಕೇಳತೊಡಗಿದರು. ಇತ್ತ ಮಕ್ಕಳ ಮರಣ ! ಅತ್ತ ವಿಪ್ರಕುಮಾರನ ಮರಣ; ಒಂದೇ ದಿನ, ಒಂದೇ ಕಡೆ, ಒಂದೇ ಸಲ !! ಸಗರನು ವೈರಾಗ್ಯಪರನಾಗಿ ಅಡವಿಗೆ ನಡೆದನು; ಜಿನದೀಕ್ಷೆ ಹೊಂದಿದನು. ದೊರೆಯ ಮಕ್ಕಳೆಲ್ಲ ಆ ಕಪಟ ಬ್ರಾಹ್ಮಣನಿಂದ ಬದುಕಿದರು. ತಂದೆ ದೀಕ್ಷೆ ಹೊಂದಿದುದನ್ನು ಕೇಳಿ ತಾವೂ ನಿರ್ವೇಗಪರರಾಗಿ ತಪೋನಿಧಿಗಳಾದರು. ಈ ವರ್ತಮಾನವನ್ನು ಕೇಳಿ ಭಗೀರಥನೂ ಮುನಿಸನ್ನಿಧಿಗೆ ಬಂದು ಜಿನ ಧರ್ಮದ ಮರ್ಮವನ್ನು ಕೇಳಿಕೊಂಡು ಶ್ರಾವಕ ವ್ರತಗಳನ್ನು ಆಚರಿಸ ತೊಡಗಿದನು. ಕೆಲಕಾಲದಲ್ಲಿ ಸಗರನಿಗೂ ಅವನ ಮಕ್ಕಳಿಗೂ ಪರಮಗತಿ-ಯಾದುದನ್ನು ಕೇಳಿ ಭಗೀರಥನೂ ಕೈಲಾಸಪರ್ವತದಲ್ಲಿ ನಿಂದು ತಪೋನಿರತ-ನಾದನು. ಅವನ ತಪಸ್ಸು ಉಗ್ರವಾದುದು. ಮಳೆ ಗಾಳಿ ಚಳಿಯೆನ್ನದೆ ಕಲ್ಲಿನಂತೆ ತಪಸ್ಸು ಮಾಡಿದನು, ಮೋಕ್ಷಪಡೆದನು.

ಸಗರನ ಕಥೆಯನ್ನು ರನ್ನ ಬಹುರಮ್ಯವಾಗಿ ಹೇಳಿದ್ದಾನೆ. ಸಗರನು ವೈರಾಗ್ಯಪರನಾದ ಸಂದರ್ಭ ಹೃದಯಂಗಮವಾಗಿದೆ. ಆದುದರಿಂದ ಅದು ಅಜಿತಸ್ವಾಮಿಯ ಚರಿತ್ರೆಯನ್ನು ಸಹ ಮರೆಸಿಬಿಡುತ್ತದೆ. ಇವೆರಡೂ ಕಥೆಗಳು ಒಂದಕ್ಕೊಂದು ಪೂರಕವಾಗಿವೆ; ಕೊನೆಗೆ ಒಂದೇಯಾಗಿ ಪರಿಣಮಿಸುತ್ತವೆ. ಹಿಂದೂ ಪುರಾಣಕಥೆಯು ಜೈನಸಂಪ್ರದಾಯದಲ್ಲಿ ಹೆಚ್ಚು ಮನೋಹರ ವಾಗಿದೆಯೆಂದು ರನ್ನ ತೋರಿಸಿಕೊಟ್ಟಿದ್ದಾನೆ.

ಅಜಿತನಾಥಪುರಾಣವನ್ನು ಓದುವಾಗ ನಮ್ಮ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುವ ವ್ಯಕ್ತಿ ಅತ್ತಿಮಬ್ಬೆ. ಅವಳೇ ಈ ಪುರಾಣವನ್ನು ಬರೆಯುವಲ್ಲಿ ರನ್ನನಿಗೆ ಪ್ರೇರಕಶಕ್ತಿ. ಅವಳನ್ನು ರನ್ನ ಬಾಯ್ತುಂಬ ಹೊಗಳಿದ್ದಾನೆ. ಅವಳು ನೆಲದ ಮೇಲೆ ಸುಳಿಯುವ ಒಂದು ಮಹಾಜಿನಶಾಸನ :

ಜಿನಪದಭಕ್ತಿ ಜಗತ್ರಯ
ಜನವಂದಿತೆ ಚಕ್ರವರ್ತಿಪೂಜಿತೆ ಜಿನಶಾ ।
ಸನರುಚಿ ಪಡೆವಳ ತೈಲನ
ಜನನಿಯೆ ತೀರ್ಥಕರ ಜನನಿಯೆನ್ನದರೊಳರೇ ॥

ತೀರ್ಥಂಕರನ ಜನನಿಗೆ ಅವಳು ಸರಿಸಮಾನವೆಂದು ರನ್ನನ ಮತ.

ಮನದೊಳ್ ತಾಳ್ದುವಳೀ ಸತಿ
ಜಿನನಂ ಜಿನಜನನಿ ಗರ್ಭದೊಳ್ ತಾಳ್ದುವಳೆಂ ।
ಬನಿತೆ ವಿಕಲ್ಪಂ ತೈಲನ
ಜನನಿಗೆ ಜಿನಜನನಿಗೇಂ ವಿಕಲ್ಪಮುಮುಂಟೇ ॥

ಅತ್ತಿಮಬ್ಬೆ ಗುಣದಂಕಕಾರ್ತಿ, ಶೀಲಾಲಂಕಾರೆ, ಚಕ್ರವರ್ತಿಪೂಜಿತೆ, ಕವಿವರ ಕಾಮಧೇನು, ಭವ್ಯಮನೋರಥ ಜನ್ಮಭೂಮಿ, ಮಹಾಸತಿ, ದಾನ ಚಿಂತಾಮಣಿ ಮತ್ತು ಜಿನಧರ್ಮಪತಾಕೆ.

ಅತ್ತಿಮಬ್ಬೆ ಐತಿಹಾಸಿಕ ವ್ಯಕ್ತಿ. ವೆಂಗಿಮಂಡಳದ ಕಂಮೆ ದೇಶಕ್ಕೆ ರಾಜಧಾನಿಯಾಗಿದ್ದ ಪುಂಗನೂರು ಎಂಬಲ್ಲಿ ನಾಗಮಯ್ಯನೆಂಬ ದಂಡನಾಯಕ

ರಾಜ್ಯವಾಳುತ್ತಿದ್ದನು. ಪುಂಗನೂರು ನಾಗಮಯ್ಯನೆಂದೇ ಇವನು ಪ್ರಸಿದ್ಧಿ-ಪಡೆದಿದ್ದಾನೆ. ನಾಗಮಯ್ಯನ ಉದರದಲ್ಲಿ ಮಲ್ಲಪ ಮತ್ತು ಪೊನ್ನಮಯ್ಯ ಇಬ್ಬರು ಮಕ್ಕಳಾದರು. ಇವರಿಬ್ಬರೂ ಮಹಾಶೂರರಿದ್ದುದಲ್ಲದೆ ಪಂಡಿತ ಮಂಡಳಿಗೂ ಕವಿಕುಲಕ್ಕೂ ಆಶ್ರಯನೀಡಿ ಧರ್ಮಪರಾಯಣರೆನಿಸಿದರು. ಶಾಸ್ತ್ರಶಸ್ತ್ರ ವಿದ್ಯಾಕುಶಲರೆಂದು ಜನತೆ ಅವರನ್ನು ಸಂಬೋಧಿಸುತ್ತಿತ್ತು. ಇವರೇ ಪೊನ್ನನಿಗೆ ಆಶ್ರಯವಿತ್ತು ಶಾಂತಿಪುರಾಣ ಬರೆಯಿಸಿದವರು. ವೀರನಾದ ಪೊನ್ನಮಯ್ಯನು ಯುದ್ಧದಲ್ಲಿ ಮಡಿದು ವೀರಶ್ರೀಯನ್ನು ಪಡೆದ. ಈ ಅಣ್ಣತಮ್ಮಂದಿರರಿಗೆ ಅನೇಕ ಜನ ಮಕ್ಕಳು. ಅವರಲ್ಲಿ ಅತ್ತಿಮಬ್ಬೆ, ಗುಂಡಮಬ್ಬೆ ಎಂಬವರು ಮಲ್ಲಪನ ಮಕ್ಕಳು-ಕನ್ಯಾರತ್ನಗಳು.

ಚಾಳುಕ್ಯರಾಜನ ಮಂತ್ರಿಯಾಗಿದ್ದ ದಲ್ಲಪನಿಗೆ ನಾಗದೇವನೆಂಬ ಮಗ ನಿದ್ದ. ಅವನಿಗೆ ಅತ್ತಿಮಬ್ಬೆ ಗುಂಡಮಬ್ಬೆ ಇಬ್ಬರನ್ನೂ ಕೊಟ್ಟು ಮದುವೆ ಮಾಡಿದರು. ನಾಗದೇವನು ಯುದ್ಧದಲ್ಲಿ ಮಡಿಯಲು, ಅತ್ತಿಮಬ್ಬೆ ಪುತ್ರವತಿಯಾದುದರಿಂದ ಗುಂಡಮಬ್ಬೆಯಂತೆ ಸಹಗಮನ ಮಾಡದೆ ವ್ರತನಿಷ್ಠಳಾಗಿ ಜಿನಧರ್ಮವನ್ನು ಬೆಳಗಿಸುತ್ತ ದಾನವಿನೋದಿಯಾಗಿ ಮೆರೆದು 'ದಾನ ಚಿಂತಾಮಣಿ' ಎನಿಸಿಕೊಂಡಳು. ತನ್ನ ತಂದೆ ಬರೆಯಿಸಿದ 'ಶಾಂತಿ ಪುರಾಣ'ದ ಸಹಸ್ರಪ್ರತಿಗಳನ್ನು ಬರೆಯಿಸಿ ಉಚಿತವಾಗಿ ಹಂಚಿದಳು. ಸಾವಿರದಾಐನೂರು ಜಿನಪ್ರತಿಮೆಗಳನ್ನು ತಯಾರಿಸಿ ಬಸದಿಗಳನ್ನು ನಿರ್ಮಿಸಿ ದೇವತಾ ಪ್ರತಿಷ್ಠಾಪನೆ ಮಾಡಿದಳಂತೆ. ರನ್ನನಿಗೆ ಆಶ್ರಯವಿತ್ತು 'ಅಜಿತನಾಥ ಪುರಾಣ'ವನ್ನು ಬರೆಸಿದಳು. ಅವಳು ಅಜಿತಸ್ವಾಮಿಯ ಮಹಾಭಕ್ತೆ. ಆದಿ ತೀರ್ಥಂಕರನ ಕಿಂಕರಳು; ಅವಳು ಗೊಮ್ಮಟಸ್ವಾಮಿಯನ್ನು ಕಂಡದ್ದು ಹೀಗೆ :

ಉನ್ನತಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತಿ ಪೋಗಿ ಕಾ
ಣ್ಬನ್ನೆಗಮನ್ನಮಂ ಬಿಸುಟು ಪರ್ವತಮಂ ಪರಿದೇಱೆ ತಜ್ಜಿನಾ
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾಱಲಕಾವೃಷ್ಟಿಯಾ
ಯ್ತೆನ್ನದೊ ದೇವಭಕ್ತೆಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್

ಅಂತಹ ಪುಣ್ಯಪುರುಷಳನ್ನು, ಮಹಾಸತಿಯನ್ನು ಪೊಗಳಿದ ರನ್ನನೇ ಧನ್ಯ ! ಅವಳನ್ನು ನೆನೆವ ನಾವೇ ಪುಣ್ಯವಂತರು.

ರನ್ನ ಕವಿಯ ಕೃತಿಗಳ ಸಂಖ್ಯೆ ಇನ್ನೂ ಹೊಂದಿಲ್ಲ. ದೊರೆತ ಎರಡು ಕೃತಿಗಳಲ್ಲಿ 'ಗದಾಯುದ್ಧ' ಅವನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ತಂದು ಕೊಟ್ಟಿತು. 'ಅಜಿತಪುರಾಣ' ಅವನೊಬ್ಬನನ್ನು ರತ್ನತ್ರಯನನ್ನಾಗಿ ಮಾಡಿತು. 'ಗದಾಯುದ್ಧ'ದಿಂದ ಬಹಿರಂಗ ಕೀರ್ತಿ; 'ಪುರಾಣತಿಲಕ'ದಿಂದ ಆತ್ಮಶುದ್ಧಿ ರನ್ನ ಕವಿಗೆ! ಗದಾಯುದ್ಧವು ಓದುಗರ ಮೆಚ್ಚುಗೆ ಪಡೆದಂತೆ ಅಜಿತಪುರಾಣವು ಪಡೆಯಲಿಕ್ಕಿಲ್ಲ. ಏನೇ ಇದ್ದರೂ ಅದೊಂದು ಮತೀಯ ಗ್ರಂಥ. ಅನ್ಯಮತ ದವರ ಮನಸ್ಸನ್ನಾದರೂ ಹಿಡಿಯುವುದೆಂತು? ಆದರೂ ರನ್ನನ ಪ್ರತಿಭಾ ಶಕ್ತಿಯಲ್ಲಿ ಮಿಂದು ತತ್ವವೂ ಸಹ ರಸಮಯವಾಗಿರುವುದನ್ನು ಅರಿಯ ಬಹುದು. ಅದೊಂದು ಬರಿ ಪುರಾಣವಲ್ಲ—ಪುರಾಣತಿಲಕ! ಕಥಾನಾಯಕ ಅಜಿತಸ್ವಾಮಿ !!

ಶ್ರೀ ವಿಮಳಧರ್ಮಚಕ್ರಮ
ನಾವಂ ಭೂಚಕ್ರದೊಳ್ ನೆಗಟ್ಚಿದನೆಮಗಾ ।
ದೇವನಜಿತಂ ಜಗತ್ರಯ
ಪಾವನನೊಸೆಗಸಮಚರಿತನಪಗತದುರಿತಂ ॥

---

# ರನ್ನನ ಗದಾಯುದ್ಧ

ಶ್ರೀಯುತನೊಳುದಾರತೆ ವಾಕ್
ಶ್ರೀಯುತನೊಳಮತ್ಸರತ್ವಮಾಗದುದಾರಂ
ಶ್ರೀಯುತನುಮತ್ಸರಂ ವಾಕ್
ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್

ಮಹಾಕವಿ ರನ್ನ ಕನ್ನಡದ ಅನರ್ಘ್ಯರತ್ನ, ಕನ್ನಡದ ಹಿರಿಯ ಆಸ್ತಿ. ಪಂಪ-ಪೊನ್ನರ ಜೊತೆಗೆ ಅವನೂ ಕನ್ನಡದ ಸೀಮಾಪುರುಷರಲ್ಲೊಬ್ಬ. ಅಜಿತ-ನಾಥಪುರಾಣ, ಗದಾಯುದ್ಧಗಳು ಅವನ ಎರಡು ತೋಳುಗಳಿದ್ದ ಹಾಗೆ; ಕಣ್ಣುಗಳಿದ್ದ ಹಾಗೆ. ಅಂದಿನಿಂದ ಇಂದಿನ ವರೆಗೂ ಅವುಗಳ ಆಕರ್ಷಣೆ ಅನೂನವಾಗಿದೆ. ಅದರಲ್ಲಿಯೂ ಗದಾಯುದ್ಧವಂತೂ ಜನಮನವನ್ನು ಸೂರೆ-ಗೊಂಡಿದೆ. ಗದಾಯುದ್ಧವನ್ನು ನೂರು ಸಲ ಓದಿದರೂ ಇನ್ನೂ ಓದಬೇಕೆನಿ-ಸುತ್ತದೆ. ಕೆಸರಲ್ಲಿ ಒಗೆದ ಹರಳಿನ ಹಾಗೆ, ಅಲ್ಲಿಯ ವಾಕ್ಯಗಳು, ಸನ್ನಿವೇಶ ಗಳು ಮನಸ್ಸಿನಲ್ಲಿ ಗಟ್ಟಿಯಾಗಿ, ಸಲೀಲವಾಗಿ ನಿಲ್ಲುತ್ತವೆ.

ರನ್ನನ ಗದಾಯುದ್ಧದ ಈ ಆಕರ್ಷಣೆಗೆ ಕಾರಣಗಳೇನು ? ಕಾರಣಗಳು ಅನೇಕವಿವೆ. ಅವುಗಳಲ್ಲಿ ಪ್ರಮುಖವಾದ ಹಲವನ್ನು ನಾವು ನೋಡಬಹುದು. ಗದಾಯುದ್ಧದ ಗಾತ್ರ, ಅಲ್ಲಿ ಮೂಡಿಬಂದ ಕವಿಯ ವ್ಯಕ್ತಿತ್ವ, ರನ್ನನ ಕಾವ್ಯ-ಕಲ್ಪನೆ, ಕಥಾಸೌಂದರ್ಯ, ನಾಟಕೀಯತೆ, ನಿತ್ಯನವ್ಯೋನವವಾಗಿ ಕಾಣುವ ಪಾತ್ರಸೃಷ್ಟಿ, ಅದ್ಭುತವಾದ ಕಾವ್ಯಶೈಲಿ ಮತ್ತು ಕೊನೆಯದಾಗಿ ಒಡಮೂಡಿ ಬಂದ ಕಾವ್ಯಸಂದೇಶ-ಇವೆಲ್ಲ ಗದಾಯುದ್ಧಕ್ಕೆ ಅಪೂರ್ವವಾದ ಮೆರುಗನ್ನು ಕೊಟ್ಟಿವೆ.

ಪ್ರಾಚೀನ ಕನ್ನಡ ಕವಿಗಳಲ್ಲಿ ಅನೇಕರು ಅಷ್ಟಾದಶ ವರ್ಣನೆಗಳ ಕಟ್ಟಿಗೆ ಬಿದ್ದು, ತಮ್ಮ ಕಾವ್ಯವನ್ನು ರಬ್ಬರ್ ಹಿಗ್ಗಿಸಿದ ಹಾಗೆ ಹಿಗ್ಗಿಸಿದರು. ಅವುಗಳಲ್ಲಿ ಗಟ್ಟಿಯಾದುವು ತಡೆದುಕೊಂಡವು; ಉಳಿದುವು ಹರಿದು ಹೋದವು. ಮಹಾ ಭಾರತದ ಗದಾ ಮತ್ತು ಸೌಪ್ತಿಕ ಪರ್ವಗಳಿಂದ ಆಯ್ದುಕೊಂಡ ತನ್ನ ಕಥಾ

ಭಾಗಕ್ಕೆ ಉಚಿತವಾಗುವಷ್ಟೇ ರನ್ನ ಗದಾಯುದ್ಧ ಕಾವ್ಯವನ್ನು ವಿಸ್ತರಿಸಿದ್ದಾನೆ. ಪೂರ್ವಸಂದರ್ಭಗಳನ್ನೆಲ್ಲ ಕೇವಲ ಸಿಂಹಾವಲೋಕನ ಕ್ರಮದಿಂದ ಹೇಳಿ ಕಾವ್ಯಕ್ಕೊಂದು ಅಪೂರ್ವ ಮೆರುಗನ್ನು ತಂದುಕೊಟ್ಟಿದ್ದಾನೆ. ಸ್ವಲ್ಪದರಲ್ಲಿಯೇ ಸ್ವಾರಸ್ಯವನ್ನು ಬಯಸುವ ಆಧುನಿಕ ವಾಚಕ ಪ್ರಜ್ಞೆಗಂತೂ ಈ ಹಿಡಿತದ ಕಾವ್ಯವಸ್ತು ತುಂಬಾ ಮನರಂಜಕವಾಗಿದೆ. ಅಂತಲೇ ರನ್ನನ ಗದಾಯುದ್ಧ, ಮತ್ತು ಜನ್ನನ ಯಶೋಧರ ಚರಿತೆಗಳನ್ನು ಆಧುನಿಕ ವಾಚಕರು ಹತ್ತಾರುಸಲ ಓದುತ್ತಾರೆ.

ವಾಚಕನಿಗೆ ಆಯತ್ತವಾಗಿ ಒದಗಿದ ಈ ಅನುಕೂಲತೆ ಬಹು ದೊಡ್ಡ ಕಾವ್ಯಗುಣವಲ್ಲ. ಗದಾಯುದ್ಧ ತನ್ನ ಅಂತಸ್ಸತ್ವದಿಂದಲೇ ಮಹೋನ್ನತವಾಗಿ ಮೆರೆದಿದೆ.

ಗದಾಯುದ್ಧವನ್ನು ಓದಿದವರಿಗೆಲ್ಲ, ಕಾವ್ಯವಸ್ತುವಿನಷ್ಟೇ ಕವಿವಿಷಯವೂ ಆದರಣೀಯವಾಗಿದೆ. ನಮ್ಮ ಪ್ರಾಚೀನ ಕವಿಗಳು ತಮ್ಮ ಬಗೆಗೆ ಹೇಳಿಕೊಳ್ಳುವುದು ಕಡಿಮೆಯೇ. ರನ್ನನಾದರೋ ತನ್ನ ವಂಶ, ಪೋಷಕರ ವಂಶಗಳನ್ನಲ್ಲದೆ, ತನ್ನ ಸ್ವಭಾವದ ಬಗ್ಗೆಯೂ ಅಲ್ಲಲ್ಲಿ ನಿರೂಪಿಸಿದ್ದಾನೆ. ಅಪೂರ್ವ ಆತ್ಮಪ್ರತ್ಯಯವುಳ್ಳ ಅವನ ಗಂಡುಗಲಿ ವ್ಯಕ್ತಿತ್ವವನ್ನು ಕಂಡಾಗ, ಅವನ ಆತ್ಮವಿಶ್ವಾಸಕ್ಕೆ ನಮೋ ಎನ್ನುವಂತಿದೆ. ಅವನ ಈ ವ್ಯಕ್ತಿವಿಷಯಕವಾಗಿ ಬಂದ ಮಾತುಗಳಲ್ಲಿ ಅವನು ಎಲ್ಲಿ ಹುಟ್ಟಿದ, ಯಾರ ಮಗ, ಯಾರನ್ನು ಮದುವೆಯಾದ, ಅವನಿಗೆಷ್ಟು ಮಕ್ಕಳು-ಎಂದು ಮೊದಲಾದ ಜೀವನದ ಬಾಹ್ಯಾಂಗಗಳು ಮಹತ್ವವಲ್ಲ. ಅದು ಅವನ ವ್ಯಕ್ತಿತ್ವದ ಪಾಟಿ ಎಂಬುದಕ್ಕಿದ್ದ ಹೊರಗಿನ ಚೌಕಟ್ಟು ಮಾತ್ರ; ಆದರೆ ನಮಗೆ ಬೇಕಾದುದು ಅವನ ನಿಜವಾದ ಆತ್ಮಗುಣ; ಅಂತಸ್ಸತ್ವ....ಅವನ ಹೃದಯದರೀತಿ ಎಂತಹದು ? ಅವನ ಆತ್ಮವಿಶ್ವಾಸ ಯಾವ ಬಗೆಯದು ? ಅವನ ಜೀವನ ದೃಷ್ಟಿ ಏನು ? ಇವು ಆ ಮಹೋನ್ನತ ವ್ಯಕ್ತಿತ್ವದ ಪೈಲುಗಳು. ಇವೆಲ್ಲವುಗಳ ದರ್ಶನವನ್ನು ನಾವು ಅವನ ಕಾವ್ಯಗಳಲ್ಲಿ ಕಾಣುತ್ತೇವೆ.

ರನ್ನ "ಆಪರಿತೋಷಾತ್ ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ" ಎಂದು ಹೇಳುವ ಮೃದುಹೃದಯದ ಕವಿವರ್ಗಕ್ಕೆ ಸೇರಿದವನಲ್ಲ.

ತಾನು ಕವಿಯಾಗೆಯೇ ಜೀವನಕಾರ್ಯವನ್ನು ನೆರವೇರಿಸಲು ಬಂದ ಮಹ. ದೇವದೂತ ಎಂಬ ಮಿಲ್ಟನ್‌ನ ತರಪದ ಆತ್ಮಪ್ರಜ್ಞೆ ಅವನಿಗಿದೆ. ತಾನು ಕವಿ; ಮಹಾಕವಿ; ಮಹಾಸುಕವಿ; ತನ್ನಂತೆ ಮುಂತಿಲ್ಲ, ಪಿಂತಿಲ್ಲ ಎಂಬ ಆತ್ಮವಿಶ್ವಾಸ ಅವನಿಗಿದೆ. ನೂರಾರು ತೀರ ಸಪ್ಪೆ ವ್ಯಕ್ತಿಗಳನ್ನು ಸಂದರ್ಶಿಸಿದನಂತರ ಇಂತಹ ಆತ್ಮ ವಿಶ್ವಾಸದ ಸಿಂಹ ಹೃದಯಗಳನ್ನು ಕಂಡಾಗ ಮನಸ್ಸು 'ಭಲಾ' ಎನ್ನುತ್ತದೆ.

**Milton** ತನ್ನ **Paradise Lost** ಬರೆಯುವಾಗ **"A theme which yet was unattempted in prose or thyme"** ಎನ್ನುವ ಮಹೋನ್ನತ ವಿಶ್ವಾಸವನ್ನು ಇಟ್ಟುಕೊಂಡಿದ್ದ ಹಾಗೆಯೇ, ರನ್ನನೂ ತನ್ನ ಕಾವ್ಯವೆಂದರೆ ಆರಾತೀಯ ಕವೀಶ್ವರರ್ ಆರುಂ ಮುನ್ನಾರ್ತರಿಲ್ಲ– ಎನ್ನುವ ಹಾಗೆ ಬರೆದಿದ್ದೇ-ನೆಂಬ ಆತ್ಮಪ್ರತ್ಯಯವುಳ್ಳವನಾಗಿದ್ದಾನೆ. ರನ್ನನ ರಂಗಸ್ಥಲ ಬಹು ದೊಡ್ಡದು. **Paradise Lost** ದಲ್ಲಿ ಭೂರ್ಭುವಸ್ಸ್ವರ್ಗ ಲೋಕಗಳನ್ನೇ ರಂಗಸ್ಥಳವನ್ನಾಗಿ-ಸಿಕೊಂಡು, ದೇವ-ಮಾನವರೇ ಪಾತ್ರಧಾರಿಗಳಾಗಿ, ಜೀವನ ದರ್ಶನದ ನಾಟಕವನ್ನಾಡಿದಂತೆ, ಗದಾಯುದ್ಧದಲ್ಲಿಯೂ ರಂಗಸ್ಥಲ ತುಂಬಾ ಮಹೋ-ನ್ನತವಾದದ್ದು.

ಕೃತಿ ನೆಗಲ್ದ ಮಹಾಯುದ್ಧಂ
ಕೃತಿಗೆ ಈಶ್ವರ ಚಕ್ರವರ್ತಿ ಸಾಹಸಭೀಮಂ
ಕೃತಿಯಂ ವಿರಚಿಸಿದಂ ಅಲಂ
ಕೃತಿಯಂ ಕವಿರತ್ನಂ ಎಂದೊಡೆ ಏ ಬಣ್ಣಿಪುದೋ ?

ತಾನು ಪಡೆದ ಬಿರುದುಗಳ ಬಗ್ಗೆಯೂ ರನ್ನನಿಗೆ ತುಂಬಾ ಅಭಿಮಾನವಿದೆ. ಅವನ್ನು ಅಂತಿಂಥ ಬಣಗು ರಾಯರಿಂದ ಅವನು ಪಡೆದಿಲ್ಲ.

ಪಡೆಯೆಡೆಯ ಬಡವರ್
ಕುಡೆ ಪಡೆದನೊ ಚಕ್ರವರ್ತಿ ತೈಲಪನೊಳ್
ಪಡೆದಂ ಮಹಿಮೋನ್ನತಿಯಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ

ರನ್ನ ಇದೇ ಆತ್ಮವಿಶ್ವಾಸವನ್ನು ಅಜಿತತೀರ್ಥಕರ ಪುರಾಣದಲ್ಲಿಯೂ ಮೆರೆದಿದ್ದಾನೆ.

ಭ್ರಾಂತೇಂ ಆದಿಪುರಾಣದ
ಶಾಂತಿಪುರಾಣದ ಸಮಾನಮ್ ಎನೆ ಕೃತಿಯಂ ಕ
ಲ್ಪಾಂತಸ್ಥಾಯಿಯಂ ಆಶ್ರಿತ
ಚಿಂತಾಮಣಿಗೆ ಅತ್ತಿಮಬ್ಬೆಗೆ ಅೞ್ತಿಯೆ ಪೇೞ್ದಂ

ಎನಿತುಂಟು ಆಗಮವರ್ಣನಮ್
ಅನಿತುಮಮ್ ಒಳಕೊಂಡು ಸಕಲ ಭವ್ಯ ಜನಂಗ
ಳ್ಗನುರಾಗಮಂ ಒಡರಿಸಿದಪುದು
ಎನಿಪ ಪುರಾಣಂ ಪುರಾಣ ತಿಲಕಮಿದಲ್ತೇ

ಕವಿಮುಖ ಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ
ಕವಿಜನ ಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ

ಕೊಂಡಾಟದ ಸಾಮಂತರ
ಮಂಡಳಿಕರ ಸಕಲ ಚಕ್ರವರ್ತಿಗಳ ಸಭಾ
ಮಂಡಲದೊಳ್ ಉಭಯ ಕವಿಮುಖ
ಮಂಡನಮ್ ಆಗಿರ್ಪ ರತ್ನಮ್ ಈ ಕವಿರತ್ನಂ

ಕವಿಮಾರ್ಗದೊಳ್ ಒಖ್ಖಾಣಿಪ
ತವಣಿಪ ಕಮ್ಮೈಸುವ ಎಡೆಯೊಳ್ ಒಖ್ಖಾಣಿಸಲುಂ
ತವಣಿಸಲುಂ ಕಮ್ಮೈಸಲುಂ
ಇವನಂತಾರ್ ಬಲ್ಲರೆನಿಸಿದಂ ಕವಿರತ್ನಂ

ವಸುಧೆಯೊಳಗೊಂದು ರತ್ನಮ್
ಇದೆಸೆದಿರ್ದುದು ಪಲವು ರತ್ನಮ್ ಇಲ್ಲೆಂಬಿನಮ್
ಏಂ ಮುಸುಳಿಸಿದನೊ ಬಹು ರತ್ನಾ
ವಸುಂಧರಾಯೆಂಬ ವಾಕ್ಯಮಂ ಕವಿರತ್ನಂ

ಅವನಿಪರೊಳ್ ನಿಜಭುಜ ಚ
ಕ್ರವರ್ತಿ ರಣಜಯಕೆ ತೈಲನೆಂತು ಅಸಹಾಯಂ

ಕವಿಗಳೊಳವಮ್ ಅಂತೆ ಕವಿಚ
ಕ್ರವರ್ತಿ ಕವಿರತ್ನನಂದು ಕೃತಿಗಸಹಾಯಂ

(ಅಂತಲೇ, ಜನ್ನ "ರನ್ನಂ ವೈಯಾಕರಣಂ; ಜನ್ನಂ ಕವಿಗಳೊಳ್ ವೈಯಾ-ಕರಣಂ; ರನ್ನಂ ಅಸಹಾಯ ಕವಿ, ಜನ್ನಂ ಅಸಹಾಯ ಸುಕವಿ" ಎಂದು ಹೇಳಿಕೊಂಡನು.)

ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ – ಇದ್ದಹಾಗೆ ರಾಜಕೀಯವಾದ ಸಾಮ್ರಾಜ್ಯಗಳ ಮಾತು ಹೇಗೇ ಇರಲಿ, ಅಪಾರವಾದ ಕಾವ್ಯಸಾಮ್ರಾಜ್ಯದ ಮಹಾ ಸಮ್ರಾಟನು ತಾನೆಂಬ ಆತ್ಮವಿಶ್ವಾಸ ರನ್ನನಿಗಿದೆ.

ಮತಿಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸದಲಂ
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ?

ಉಳಿದ ಕವಿಗಳೆಲ್ಲ ಜಿನಮತಾಂಬೋಧಿಯ ತಡಿತಡಿಯಲ್ಲಿ ಮಾತ್ರ ಓಡಾಡಿದಾಗ, ತಾನು ಅದರ ಆಳಕ್ಕೆ ಇಳಿದು ಅನರ್ಘ್ಯ ರತ್ನಗಳನ್ನು ಹೊರ-ತಂದಿದ್ದೇನೆಂಬ ಕಲ್ಪನೆ ರನ್ನನಿಗಿದೆ.

ನೆಗಟ್ದ ಕವಿರತ್ನನಂತೆ ಒಳ
ಪುಗುವುದು ಮೊಗ್ಗಾಯ್ತೆ ಜಿನಮತಾಂಬೋಧಿಯುಮಂ
ಪುಗದೆ ಆಗಮಮಪ್ ಅಜೀವರ ಬಗೆ
ವುಗದೆ ಕೆಲರ್ ಕವಿಗಳ್ ಆಡಿದರ್ ತಡಿತಡಿಯೊಳ್

ಜಿನನನ್ನು ಹೊಗಳಬೇಕು ರನ್ನನು ಮಾತ್ರ—

ಪುತ್ನ ಕವಿಪ್ರವರರ್ ಮೇಣ್ ನೂತ್ನ ಕವಿಪ್ರವರರ್ ಅಕ್ಕೆ
ಜಿನನಭಿಷವಮಂ ಯತ್ನದೆ ಪೇಟ್ದೊಡಮ್ ಎಂ
ಕವಿರತ್ನನ ಜನ್ಮಾಭಿಷೇಕಮಂ ಪೋಲ್ತಪುದೇ ?

ಇನಿತು ಉಪಪತ್ತಿಯಿಲ್ಲ; ಬಿನ್ನಣಮ್ ಇನಿತಿಲ್ಲ; ಅರ್ಥದೃಷ್ಟಿ ಇಲ್ಲ ಎಂದು ಮೊದಲಾಗಿ ಎಲ್ಲರೂ ರನ್ನನ ಕಾವ್ಯರತ್ನವನ್ನು ವರ್ಣಿಸುವವರೇ. ಕವಿಗಳಿವ-

ರಿರ್ವರೆ ಪುಣ್ಯವಂತರ್, ಇರ್ವರೆ ಕೃತಾರ್ಥರ್, ಇರ್ವರೆ ಸುಭಗರ್ ಕವಿತಾ ಗುಣಾರ್ಣವಂ, ಮೇಣ್ ಕವಿರತ್ನಂ-ಗುಣಕ್ಕೆ ಮತ್ಸರಮುಂಟೆ ?

ತ್ರಿಜಗದೊಳ್ ಆದಿಪುರಾಣಮಂ
ಅಜಿತಪುರಾಣಮುಮಂ ಎಸೆಯೆ ಪೇಳ್ದುದರಿಂದಂ
ದ್ವಿಜವಂಶಧ್ವಜ ವೈಶ್ಯ
ಧ್ವಜರೆನ್ನದರೊಳರೆ ಪಂಪನಂ ರತ್ನನುಮಂ

ಈ ದೊರೆಯ ಕಥಾನಾಯಕಂ
ಈ ದೊರೆಯ ಮಹಾಪ್ರಸಿದ್ಧಕವಿ ಪೋದರೊಳ್ ಇಲ್ಲ ।
ಆದರೊಳ್ ಇಲ್ಲ, ಅಪ್ಪರೊಳ್ ಇಲ್ಲ
ಈ ದೊರೆಯವು ಕೃತಿಗಳಿಲ್ಲ ಸದಲಂಕೃತಿಗಳ್ ॥

ಇಷ್ಟು ಆತ್ಮವಿಶ್ವಾಸವಿದ್ದ ಕವಿ-

Imp
ಆರಾತೀಯ ಕವೀಶ್ವರರ್
ಆರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯಂ ಒಡೆದಂ
ಸಾರಸ್ವತಮ್ ಎನಿಪ ಕವಿತೆಯೊಳ್ ಕವಿರತ್ನಂ

ಎಂದೂ,

Imp
ರತ್ನ ಪರೀಕ್ಷಕನಾಂ ಕೃತಿ-
ರತ್ನಪರೀಕ್ಷಕನೆಂ ಎಂದು ಫಣಿಪತಿಯ ಫಣಾ-
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇಟ್ ಪರೀಕ್ಷಿಪಂಗೆ ಎಂಟೆರ್ದೆಯೇ ?

ಎಂದು ಉದ್ಘೋಷಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ರನ್ನನ ಗದಾಯುದ್ಧದಲ್ಲಿ ನಾವು ಅವನ ವ್ಯಕ್ತಿತ್ವದ ಬರಿಯ ಆತ್ಮ ಪ್ರತ್ಯಯವನ್ನು ಮಾತ್ರ ಕಾಣುತ್ತೇವೆಂದಲ್ಲ; ಅಲ್ಲಲ್ಲಿ ಅವನ ಜೀವನದೃಷ್ಟಿಯ ಮಿಂಚನ್ನೂ ಕಾಣುತ್ತಿದ್ದೇವೆ. ಇಂಥ ಮಾತುಗಳು ಅವನು ಹೇಳಿದ ಕಾವ್ಯ ಭಾಗಕ್ಕೆ ತೀರ ಆವಶ್ಯಕವಿಲ್ಲದಿದ್ದಾಗಲೂ, ಬಂದುದನ್ನು ಕಂಡರೆ, ಈ ಮಾತಿನ

ಬಗೆಗೆ ರನ್ನನಿಗೆ ಏನೋ ಒಂದು ವಿಧದ ಅಭಿರುಚಿ-ಸಮಾಧಾನ ಇದ್ದ ಹಾಗೆ ಕಾಣುತ್ತದೆ. ಬಹುಶಃ ಇವನ್ನು ಅವನು ತನ್ನ ಆತ್ಮಕ್ಕೇ ಹೇಳಿಕೊಳ್ಳುತ್ತಿರ-ಬೇಕು.

ಅನಲನಂದನೆಯಾದ ದ್ರೌಪದಿ ಅನಿಲನಂದನನನ್ನು ಕ್ಷಾತ್ರಕ್ಕೆ ಭುಲ್ಲವಿಸಿ, ಬಹುಶಃ ತಮ್ಮ ಸುದೀರ್ಘ ದಾಂಪತ್ಯಜೀವನದಲ್ಲಿ ಅವನು ಕಂಡರಿಯದಿದ್ದ ಜೀವನಸತ್ವವೇನೋ ಎಂಬಂತೆ ಈ ಮಾತನ್ನು ಹೇಳುತ್ತಿದ್ದಾಳೆ-

ಒಡಲ್ ಒಡಮೆ ಎಂಬ ಇವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮ್ ಅದಱಿಂ
ಕೆಡುವ ಒಡಲ್ ಒಡಮೆಯಂ ಎಿದುಂ
ಕೆಡದ ಒಡಮೆಗೆ ಮಾಱುಗುಡುವುದು ಇಱಿವಬೆಡಂಗಾ

ಅಲ್ಲದೆ,

ಮಣಿಕನಕಂ ವಸ್ತು ವಿಭೂ-
ಷಣಂಗಳಂ ಕೊಟ್ಟು ಪೆಂಡಿರ್ ಒಲ್ವರೆ ಗಂಡರ್
ಗುಣಮುನೆ ಮೆರೆವುದು ಶಸ್ತ್ರ-
ವ್ರಣಮಂ ನಿನ್ನಂತೆ ಮೆಱೆವುದು ಇಱಿವ ಬೆಡಂಗಾ

ದ್ರೌಪದಿಯ ಈ ಉಪದೇಶ ಭೀಮಸೇನನಿಗೆ ಅವಶ್ಯವಿರಲಿ, ಬಿಡಲಿ; ಹತ್ತನೆಯ ಶತಮಾನದ ಕ್ಷಾತ್ರಯುಗಕ್ಕೆ ಆವಶ್ಯಕವಾದ ಜೀವನ ಸಂದೇಶವಿದ್ದಂತೆ ಕಾಣುತ್ತದೆ.

ಅದರಂತೆಯೇ, ದುರ್ಯೋಧನಾವಸಾನಕಾಲದಲ್ಲಿ ಅಶ್ವತ್ಥಾಮ ಮತ್ತು ರಾಜ್ಯಲಕ್ಷ್ಮಿಯರ ನಡುವಿನ ಸಂವಾದವನ್ನು ರನ್ನ ಅಷ್ಟು ಲಂಬಿಸುವ ಆವಶ್ಯಕತೆ ಇದ್ದಹಾಗೆ ಕಾಣಲಿಲ್ಲ. ಕಾವ್ಯವ್ಯಾಪಾರದಲ್ಲಿ ಈ ಘಟನೆ ನಡೆಯುವಂತ ಕಾಣುತ್ತದೆ. ಕವಿ ತನ್ನ ಹೃದಯದಲ್ಲಿ ಕುದಿಯುತ್ತಿರುವ ಹಲವು ಮಾತುಗಳನ್ನು ಸಂದರ್ಭ ಒದಗಿದಾಗ ಹಲವಾರು ಪಾತ್ರಗಳ ಹಿಂದೆ ನಿಂತು ಆ ಅನಾಮಧೇಯತ್ವದ ರಕ್ಷಣೆಯಲ್ಲಿ ಇಂಥ ಮಾತುಗಳನ್ನು ಹೇಳುವಂತೆ ಕಾಣುತ್ತದೆ. ನೋಡುವ ವಸ್ತು ಯಾವುದೇ ಆದರೂ, ನೋಡುವ ಕಣ್ಣು ಕವಿಯದೇ ಅಲ್ಲವೇ ?

ಅಂತಲೇ, ರನ್ನನ ಅಶ್ವತ್ಥಾಮ ರಾಜ್ಯಲಕ್ಷ್ಮಿಗೆ ಹೇಳುತ್ತಾನೆ– ಲಕ್ಷ್ಮಿ, ಕಾಂಚನ, ಹಣ ಇದನ್ನು ಮಾಡಿಸುತ್ತದೆ.

ಕಲಿ ಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ
ಸಲೆವೃದ್ಧನೆಂದು ಬಗೆಯದೆ
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮ್ ಒಳರೇ ?

ಇಱಿಯಿಸುವಯ್ ತಂದೆ ಮಕ್ಕಳಂ
ಇಱಿಯಿಸುವಯ್ ಸೋದರರ್ಕಳಂ ತಮ್ಮೊಳ್ ತಳ್ತು
ಇಱಿಯಿಸುವಯ್ ಗುರುಶಿಷ್ಯರಂ
ಅಱಗುಲಿ ನಿನ್ನಿಂ ನಿಕೃಷ್ಟರಾದರುಮ್ ಒಳರೇ ?

ಮಲಿನರನೆ ಪೊರ್ದುವಯ್ ನಿ-
ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್
ಜಲಮಿರ್ಪ ದೆಸೆಯೊಳ್ ಇರ್ದು ಆ
ಕಿಲುಂಬುಗೊಂಡಿರ್ದ ದೆಸೆಯೊಳ್ ಇರ್ದುದೆ ಪೇಳ್ಗಂ

ಧವಳಾತಪತ್ರಂ ಅಡ್ಡಂ
ದಿವಸಕೆ ಸಲಲ್ ಈಯದಂತಿರೆ ಇರ್ಪುದು ವಿಚಳ-
ದ್ಧವಳಿಮ ಚಮರರುಹಂ ಬೀ-
ಸುವ ನೆವದಿಂ ಪಾಱಿ ಬೀಸುವುದು ನೃಪಗುಣಮಂ

ತೊಡೆಬೇನೆಯಾಗಿ ದುರ್ಯೋಧನ ನರಳುತ್ತಿರುವ ಸಮಯದಲ್ಲಿ ರಾಜ್ಯಲಕ್ಷ್ಮಿಗೆ ಹೇಳಿದ ಈ ಮಾತುಗಳು ಅಶ್ವತ್ಥಾಮನ ಉಕ್ತಿಗಳೋ ಅಥವಾ ರನ್ನನ ಕವಿ ಹೃದಯದ ಅಭಿವ್ಯಕ್ತಿಯೋ ಪರಾಮರ್ಶಿಸಬೇಕು........

ಈ ಅಭಿಪ್ರಾಯವನ್ನೇ ನಾವು ರನ್ನನು ಕಾವ್ಯಗುಣದ ಬಗ್ಗೆ ಅಜಿತ ಪುರಾಣದಲ್ಲಿ ಹೇಳುವಾಗ ಕಾಣುತ್ತೇವೆ. ಗುಣಮಂ ಕಾಯದೆ ಕಾವರೇ ಪಣಮುಮಂ ಕಲ್ಪಾಂತರಸ್ಥಾಯಿಯೇ ಗುಣದಂತೆ ಆ ಪಣಮ್ ಅನ್ಯರಿಂದೆ ಅರಸರಿಂ ದಾಯಾದರಿಂ ಕಳ್ಳರಿಂ ಪಣಮ್ ಎಂತುಂ ಕಿಡಲಿರ್ಪುದು; ಉಳ್ಳ

ಗುಣಕೇಂ ಕೇಡುಂಟೆ? ಕಾವ್ಯಂಗಳೊಳ್ ಗುಣಮಂ ಬಯ್ಸಿಡಬೇಡ; ನಿಲ್ವೊಡೆ ಗುಣಂ ನಿಲ್ಕುಂ ಪಣಂ ನಿಲ್ಕುಮೇ?

ರನ್ನನಿರಿಸಿಕೊಂಡ ಕಾವ್ಯ ಕಲ್ಪನೆ ಏನು? ಈ ವಿಷಯದ ಬಗ್ಗೆಯೂ ಗದಾಯುದ್ಧದಲ್ಲಿ ಸಂದರ್ಭೋಚಿತವಾಗಿ ಮಾತುಗಳು ಬರುತ್ತವೆ. ಕಾವ್ಯದಲ್ಲಿ ಅಲಂಕ್ರಿಯಾ ರಚನೆ ಪದಿನಾರಲ್ಲ; ಮೂವತ್ತಾರು; ರಸ ಶೃಂಗಾರ ಮಾತ್ರ ವಲ್ಲ, ಒಂಬತ್ತು ರಸಗಳುಃ ಈ ರೀತಿ, ಅಂಗನೋಚಿತವಾದ ರಸಾಲಂಕಾರ ವನ್ನು ತಾಳಿದ ವಾಕ್ಸುಂದರಿ ತನ್ನ ಮುಖಾಂಬೋಜದಲ್ಲಿ ನೆಲೆಸಲಿ ಎಂದು ರನ್ನ ಪ್ರಾರ್ಥಿಸುತ್ತಾನೆ. ಶೃಂಗಾರ ರಸರಾಜವೆಂದು ಹೇಳಲ್ಪಡುತ್ತದೆ. ರನ್ನನ ಕಾಲದಲ್ಲಿಯೇ ಶೃಂಗಾರಕ್ಕೆ ಈ ಪ್ರಾಧಾನ್ಯಪಟ್ಟ ಬಂದಿರಬೇಕು. ನೇಮಿಚಂದ್ರ ನಂತೂ 'ಲೀಲಾವತಿ' ಗ್ರಂಥದಲ್ಲಿ "ಸ್ತ್ರೀರೂಪಮೆ ರೂಪಮ್, ಶೃಂಗಾರಮೆ ರಸಮ್" ಎಂದು ಸಾರಿದನು. ಶೃಂಗಾರದ ಈ ಅವಾಸ್ತವ ಪ್ರಾಧಾನ್ಯ ರನ್ನನ ಗಂಭೀರ ಹೃದಯಕ್ಕೆ ಒಗ್ಗದು. ರನ್ನನ ದ್ರೌಪದಿ ಲಕ್ಷಣವಾಗಿ ಗದಾಯುದ್ಧ ದಲ್ಲಿ ಹೂಮುಡಿದದ್ದು ಒಂದು ಸಲ ಮಾತ್ರ. ಅವಳು ನಕ್ಕದ್ದು ಒಂದು ಸಲವೇ, ನಿಜ. ಅದು ತುಂಬಾ ಮೋಹಕ ನಗೆ; ಸಂತೃಪ್ತ ನಗೆ; ಶೃಂಗಾರದ ನಗೆ. ಏನು ನಗೆ ಯದು ದ್ರೌಪದಿಯದು! ಅದರ ಹಿಂದೆ ಎಷ್ಟು ಜನರ ಹೆಣ ತೇಲುತ್ತಿವೆ-ಇದ-ರೊಳ್ ಮೂರ್ಧಾಭಿಷಿಕ್ತರ್, ಮಣಿ ಮಕುಟಧರರ್, ಬಾಹಾಬಳಾಗ್ರ್ಯರ್, ಕದನಪ್ರೋಚ್ಚಂಡದಂಡಕ್ರಮ ವಿಜಿತರಿಪು ಕ್ಷತ್ರಿಯರ್, ವೀರಲಕ್ಷ್ಮೀಸದನರ್, ಸೋಮಾಮೃತಾಸ್ವಾದನ ಶುಚಿವದನರ್, ಮುನ್ನಮ್ ಅಟ್ಟಾಡಿದರ್. ಆ ಕೇಶಪಾಶದ ಕೀನಾಶಪಾಶದ ಕಥೆ ಮುಗಿದ ನಂತರ ಅರಳಿಬಂದ ನಗೆ ಅದು. ಆದರೆ, ದ್ರೌಪದಿ ನಕ್ಕಾಗ, ರನ್ನ ತನ್ನ ಲೆಕ್ಕಣಿಕೆಯನ್ನು ಸಡಿಲು ಬಿಡುತ್ತಾನೆ. ಅವನು ಮಾತು ಹೇಳಿದ್ದೂ ಹೇಳಿದ್ದೇ, ಶಬ್ದ ತೂರಿದ್ದೂ ತೂರಿದ್ದೇ. ಯಾವ ರೀತಿ ಆ ನಗೆಯನ್ನು ವರ್ಣಿಸಿದರೂ ಅವನ ಮನಸ್ಸಿಗೆ ತೃಪ್ತಿಯಿಲ್ಲ. ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್-

ಸ್ಮರಸಂಜೀವನೆ ಕೃಷ್ಣೆ ಪೂ ಮುಡಿದಳ್ ಆ ಶೃಂಗಾರಮ್, ಆ ಭಾವಮ್, ಆ ಪರಿಜು, ಆ ವಿಭ್ರಮಮ್, ಆ ಬೆಡಂಗು, ನೆಗಟ್ದ ಆ ಸೌಂದರ್ಯಮ್, ಆ ಬಿಂಕಮ್, ಆ ತರಳಾಪಾಂಗವಿಲಾಸಮ್, ಆ ಲಟಹಮ್, ಆ ಲಾವಣ್ಯಮ್, ಆ ಪುಣ್ಯಮ್, ಆ ದರಹಾಸಾಮೃತಮ್, ಏಂ ಮನಂಗೊಳಿಸಿತೊ !!!

ಹೀಗಿದ್ದರೂ ರನ್ನನಿಗೆ ಶೃಂಗಾರರಸವೇ ಪ್ರಧಾನವಲ್ಲ. ಅವನು ಅಜಿತ ಪುರಾಣದಲ್ಲಿ ಹೇಳಿದ ಹಾಗೆ –

ಜಿತಕಂದರ್ಪಮೆನಿಪ್ಪ ಶಾಂತರಸಮೆತ್ತ ! ಉದ್ದಾಮ ಶೃಂಗಾರಮೆತ್ತ !
ಅತಿ ಗಂಭೀರ ಜಿನೋಕ್ತಿಯೆತ್ತ ! ಸಕಲಂ ಲೋಕೋಕ್ತಿಯೆತ್ತ !
ಆಗಮಾಮೃತಮ್ ಎತ್ತ ! ಅನ್ಯಮತಪ್ರಚಂಡವಿಷಮ್ ಎತ್ತಮ್ !
ಎಂಬಂತು ಕಿಂ–ಕೇನ ಸಂಗತಮ್....

ಅಲ್ಲದೆ, ಕವಿಯಾದವ ಕವಿಮಾರ್ಗದ ಒಳಪೊಕ್ಕು ನವರಸಂ ತೆಜಿಯೆ ನುಡಿಯಬೇಕೇ ವಿನಾ ಗೂಡಾರದ ಕವಿಯಂತೆ ಮುಚ್ಚಿ ಹೋಗಬಾರದು. ದರದುರವುಂ ಅಂಟಿಸುಂಟಿಯುಂ ಅರೆವೊರಕನುಂ ಎನಿಸಿ ನುಡಿಯದೆ, ರಸಾಂತರಂಗಳನ್ನು ಮುಟ್ಟಿ ರಂಜಿಸಬೇಕು.

ಸರಸತಿಯಂ ಅಬಲೆಯಂ ಗೋಣ್ಮುರಿಗೊಂಡು
ಅರ್ಥಕ್ಕೆ ಕುದಿದು ನೋಯಿಸುವವಂ ಅಕ್ಕರಿಗನೆ ?
ಪಾತಕಮ್; ಆತನೇ ಸರಸ್ವತೀ ದ್ರೋಹಂ
ಅವನನಾರ್ ಮುಟ್ಟುವರೋ.

ಅಂತಲೇ, ರನ್ನ ತನ್ನ ಗದಾಯುದ್ಧದಲ್ಲಿ ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದು ಆ ಶಬ್ದಗಳನ್ನು ಸಾರಸ್ವತ ಪ್ರಪಂಚದಲ್ಲಿ ಸೂರೆಮಾಡಿದ್ದೇನೆಂದು ಹೇಳುತ್ತಾನೆ. ವಿಮರ್ಶಕರು ನಿಜವಾದ ಕಾವ್ಯ ಗುಣಗಳನ್ನು ಕಾಣಲಿಕ್ಕೆ ಯತ್ನಿಸಬೇಕು. ಕಾಳನ್ನು ಕೇರುವ ಸಾರಣಿ ಗಟ್ಟಿಯಾಗಿದ್ದ ಕಾಳುಗಳನ್ನು ಕೆಳಕ್ಕೆ ಬಿಟ್ಟು ಬರಿ ಕಸವನ್ನೇ ಹಿಡಿಯುವ ಹಾಗೆ ವಿಮರ್ಶಕ ದೋಷಸಂಶೋಧನೆಯಲ್ಲಿಯೇ ಮಾತ್ರ ತೊಡಗಬಾರದು.

ಪೊಸದೇಸೆಯಂ ಬೆಡಂಗಂ
ರಸಘಟ್ಟಿಯಂ ಅರ್ಥದೃಷ್ಟಿಯಂ ಬಗೆವರೊ ಭಾ
ವಿಸುವರೊ ಸಾರಣೆಯಂತಿರೆ
ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್

ಇದು ರನ್ನ ಬಗೆದ ಕಾವ್ಯಕಲ್ಪನೆ— ಅವನು ಇದನ್ನು ತನ್ನ ಶೈಲಿಯ ಮಾದರಿಯಾಗಿಯೂ ಇಟ್ಟುಕೊಂಡಿರಬೇಕು.

ರನ್ನನ ಶೈಲಿ ಅಸ್ವಾದ್ಯಶವಾದುದು. ಅವನ ವ್ಯಕ್ತಿತ್ವದ ಹಾಗೆಯೇ ಅದೂ ಗಂಡುಗುಣದಿಂದ ಕೂಡಿದುದು. ಅವನ ಬರವಣಿಗೆ ಅವನ ಭೀಮಸೇನನ ಮಾತಿನ ಹಾಗೆ ಶಿಲಾನಿಕ್ಷಿಪ್ತಾಕ್ಷರ; ಟಾತಡಾಢಣ. ಮಿಲ್ಟನ್ ಮಹಾಕವಿಯ ಬಗ್ಗೆ "Mighty mouthed inventor of hormonies" ಎದೂ "God gifted organ of Englaod" ಎಂದೂ ಹೇಳುವ. ದುಂಟು. ರನ್ನ ಪೊಸದೇಸೆಯ ಜತೆಗೆ ಬೆಡಂಗನ್ನೂ ಹೇಳಿದ. ಅವನ ಕಾವ್ಯಸಾಮ್ರಾಜ್ಯದಲ್ಲಿ ಪದೋಕ್ತಿ ಭೇರಿ; ಕೊಳಲಲ್ಲ. ಅವನು ಪಂಪನಲ್ಲಿ ಮೆಚ್ಚಿಕೊಂಡದ್ದೂ ಈ ತುಂಬು ದನಿಯ ಕಹಳೆ ಕಂಠವನ್ನೇ. "ಸುಭಗ ಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಟ್ಟುದು." ಇದು ರನ್ನನಿಗೂ ಉಪಾದೇಯ. ರನ್ನನ ಕಾವ್ಯವನ್ನು ಹೇಳಲು ಪುಪ್ಪುಸ ತುಂಬಾ ಗಟ್ಟಿಯಾಗಿರಬೇಕು; ಕ್ಷಯ ರೋಗಿಯು ಓದುವ ಕಾವ್ಯವಲ್ಲದು. ಅದಕ್ಕೆ ಕಹಳೆಯ ಕಂಠವೇ ಬೇಕೇ ವಿನಾ ಕೊಳಲಿನ ಮೆಲ್ಲುಲಿ ಸಾಲದು.

೧ ಈ ವಾಗ್ವೈಭವ, ಈ ವಾಣಿಯ ಬೆಡಂಗು, ಈ ಟಾತಡಾಢಣ, ಈ ಮಹಿಮೋನ್ನತಿ, ಈ ಹೊಡೆತ, ಇದು ರನ್ನನ ಶೈಲಿಯ ಪ್ರಮುಖಲಕ್ಷಣ.

ಚತುರಂತ ಕ್ಷಿತಿಕಾಂತೆ ಕೇಳ್, ಜಲಧಿಕೇಳ್, ಸಪ್ತಾರ್ಚಿಕೇಳ್
ತಾತಮಾರುತಕೇಳ್, ಮಾರುತಮಾರ್ಗಕೇಳ್ ಪಗೆವನಂ ಕೊಂದು
ಎನ್ನ ಕೋಪಾಗ್ನಿಗಾಹುತಿಮಾಟ್ಪೆಂ........

ಅಥವಾ

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲ್ ಅಂತಾಸರೋ-
ಮಧ್ಯದಿಂ ಸಾ
೦ ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟು
ಎಲ್ಲಿದಾಭೀಮಮ್ ಎಂದು
ಎಣ್ದೆಸೆಯಂ ನೋಡುತ್ತೆ ಮತ್ತದ್ಭುತ ನಟನಿಟಿಲ
ಆಲೋಲ ಕೀಲಾಕ್ಷಿವೊಲ್ ದ-
ಳ್ಪಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ
ಧಾರ್ತರಾಷ್ಟ್ರಂ

ಅಥವಾ

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾನಾಡಜೂದಿಂ
ಗಿದು ಪಾಂಚಾಲೀ ಪ್ರಪಂಚಕ್ಕಿದು —ಎಂದು

ನಿರ್ಜಿತ ಭೀಮಸೇನನಾದ ಭೀಮಸೇನನು ಫಣಿರಾಜಕೇತನನ್ನು ದಪ್ಪರಿ-ದಟ್ಟಿಂ, ಪೊಟ್ಟನೆ, ದೊಪ್ಪಘೊಗಪ್ಪನೆ, ದಿಧಿಲ್ ಬುಧಿಲ್ ಎನೆ ಹೊಡೆಯು-ವಾಗ ರನ್ನನ ಈ ವಾಗ್ವೈಭವ ಪ್ರಕಟವಾಗುತ್ತದೆ.

ವಾಗ್ವೈಭವದಂತೆಯೇ ಅವನ ಶೈಲಿಯ ಇನ್ನೊಂದು ಗುಣವೆಂದರೆ ನಾಟಕೀಯತೆ, ಸಂಭಾಷಣಾ ಸಲೀಲತೆ. ಗದಾಯುದ್ಧವನ್ನು ಓದುತ್ತಿರುವಾಗ ಇಡೀ ಗದಾಯುದ್ಧ ದೃಶ್ಯ ನಮ್ಮ ಕಣ್ಣೆದುರಿಗೆ ನಡೆಯುತ್ತಿದೆಯೋ ಏನೋ ಎನ್ನಿಸುತ್ತದೆ.

ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್,
ಮತ್ಸ್ಯಹೋದರರಂ ಕೋಪದೆ ತಿಂದುದರ್ಕೆ ಎರಡುಗೊಳ್
ದುಶ್ಯಾಸನ ಉರಃಸ್ಥಳಕ್ಷರದ್ ಅಸ್ರಾಂಬುವಂ ಆರ್ದು-ಪೀರ್ದ
ಮುಳಿಸಿಂಗಂ ಮೂರುಗೊಳ್ ಎಂದು ಪೊಯ್ದಂ ಓವದೆ
ಎತ್ತಿಗದೆಯಂ ಮರ್ಯೋಧನಂ ಭೀಮನಂ

ಈ ಸಂಭಾಷಣಾ ಶೈಲಿ ವ್ಯಂಗ್ಯ—ಕಟಕಿಗಳಿಗೆ ಏರಿ ಕಾವೇರಿದಾಗಲಂತೂ ರನ್ನನನ್ನು ಮೀರಿಸುವವರೇ ಇಲ್ಲ—

ಹರಿಸಂಧಾನಕ್ಕೆ ಬಂದಂದು ಅವಗಡಿಸಿದ ಅಹಂಕಾರಮದೆಲ್ಲಿತ್ತೊ ?
ಮತ್ಸ್ಯಹೋದರರಂ ಕಾಂತಾರದೊಳ್ (ತಿಜಿನೆ) ತಿರುಪಿದ ಸೊರ್ಕು ಈಗಳ್
ಏನಾದುದೋ ? ( ಔ )

ಸಂಭಾಷಣಾ ಸಲೀಲತೆ ರನ್ನನ ಸ್ಥಾಯಿ. ಅವನ ಪ್ರಜ್ಞೆ ಪ್ರಾಮುಖ್ಯವಾಗಿ ನಾಟಕ ಪ್ರಜ್ಞೆ. ಅವನು ಇಂದಿನ ಕಾಲದಲ್ಲಿ ಬದುಕಿದ್ದರೆ, ಕಾವ್ಯಕ್ಕಿಂತ ನಾಟಕಗಳನ್ನೇ ಹೆಚ್ಚಾಗಿ ಗ್ರಥಿಸುತ್ತಿದ್ದನೋ ಏನೋ. ರನ್ನನಲ್ಲಿ ಬರಿಯ ವ್ಯಕ್ತಿಗಳು ಮಾತನಾಡುವದಿಲ್ಲ; ಇಡೀ ನಿಸರ್ಗವೇ ಮಾತಾಡುತ್ತದೆ. ಮಾನವನ ಹಾಗೆ ಮಾನವೀಯ ಆಶೆ ಆತಿಥ್ಯಕನಲಿಕೆಗಳನ್ನೆಲ್ಲ ವಹಿಸುತ್ತದೆ. ಅವನ ಪಕ್ಷಿಗಳು, ನೀರಿನ ತೆರೆಯ ತರಂಗಗಳು, ವಿಕಚಿತ್ ಪಂಕೇಜಗಳು, ಮೀಂಗುಲಿಗಳು,

ಸರೋವರಗಳು ಎಲ್ಲವೂ ರನ್ನನ ಕೂಡ ಮಾತಾಡಿವೆ. ಅವನ ಕಾವ್ಯದಲ್ಲಿ ಸೃಷ್ಟಿ ಕೂಡ ಮಾತನಾಡುತ್ತದೆ. ಮಾನವೀಯವಾಗಿ ವರ್ತಿಸುತ್ತದೆ. ಭೀಮಾದಿಗಳು ವೈಶಂಪಾಯನ ತಡಿಗೆ ಬಂದಾಗ—

ವಿರುವತ್‌ಸಾರಸ ರಾಜಹಂಸರವದಿಂ "ಏವಂದಿರೇ! ಈ ಬನ್ನಿಮ್: ಇಂತು ಇರಿಮ್" ಎಂದು ಆದರಿಪಂತುಟಾಯ್ತು— ಪವನ ಉದ್ಧೂತ ಉತ್ತರಾಂಗ ಅಂಬುವಿಂ ತರದಿಂ ಕಾಲ್ಗೆ ಎಱೆಪಂತುಟಾಯ್ತು;

ವಿಕಚಿತ್ ಪಂಕೇಜದಿಂ ಪಂಕಜಾಕರಮ್ ಅರ್ಘ್ಯಂಗುಡುವಂತುಟಾಯ್ತು ಅನಿಲಜಂಗೆ ಅಭ್ಯಾಗತ ಪ್ರೀತಿಯಿಂ.

ಏನು ಅಮೋಘ ದೃಶ್ಯವಿದು! ಅರಳುತ್ತಿರುವ ಕಮಲದ ಹೂವಿನಿಂದ ಪಟಪಟ ಉದುರಿ ಬೀಳುತ್ತಿರುವ ನೀರ್ವನಿಗಳು ಅಭ್ಯಾಗತರಿಗೆ ಅರ್ಘ್ಯ ಕೊಡುವಂತೆ ಕಾಣುತ್ತವೆ. ಮೀನವನ್ನು ಹಿಡಿಯಲು, ನೀರಿಗೆ ಧುಮ್ಮನೆ ಧುಮ್ಮಿಕ್ಕುವ ಮೀಂಗುಲಿಗವಕ್ಕಿ "ನೋಡು ಇಲ್ಲಿರ್ದಂ ಪಿಂಗಾಕ್ಷಂ" ಎಂದು ಪವನಸುತನಿಗೆ ತೋರುವ ಹಾಗೆ ಕಾಣುತ್ತದೆ. ಒಮ್ಮೆಲೆಯೇ ಮೇಲೆ ಹಾರಿ ಹೋಗುವ ಪಕ್ಷಿಗಳ ಶುಭ್ರವಾದ ಹಿಂಡು ಸರೋವರದ ಎರ್ದೆ ಗಾಬರಿಯಾಗಿ ಪವ್ವನೆ ಪಾರ್ವಂತೆ ಕಾಣುತ್ತದೆ.

ರನ್ನನ ವಾಗ್ವೈಭವ, ನಾಟಕೀಯ ಪ್ರಜ್ಞೆಯ ಹಾಗೆ, ಅವನ ಉತ್ಪ್ರೇಕ್ಷಾ ಸಾಮರ್ಥ್ಯವೂ ಅದ್ಭುತವಾದದ್ದು. ಕುಮಾರವ್ಯಾಸ ರೂಪಕ ಚಕ್ರವರ್ತಿಯಾಗಿದ್ದರೆ, ರನ್ನ ಉತ್ಪ್ರೇಕ್ಷಾ ಚಕ್ರವರ್ತಿ ಎಂದು ಹೇಳಬಹುದು.

ನಗುವಾಗಲೇ ತೀರಿಕೊಂಡ ಕರ್ಣ "ಪಾಟಿಯಂ ನೆಱಪದೆ ಆಳ್ದನ ಕಜ್ಜಮಂ ಒಕ್ಕು ಸತ್ತರಂ ನಗುವವೊಲ್" ಕಾಣುತ್ತಾನೆ. 'ಅಶ್ವತ್ಥಾಮೋಹತೋ ಹತಃ' ಎಂದು ಧರ್ಮರಾಜನು ಘೋಷಿಸಿದಾಗ, ಬಿಲ್ಲುಬಾಣಗಳನ್ನು ಬಿಸುಟು ಪ್ರಾಣ ನೀಗಿದ ಆಚಾರ್ಯ ದ್ರೋಣರು ತಮ್ಮ ಮಗನನ್ನು ಹುಡುಕಲು ಹೋಗುವದಿಲ್ಲ., ಧರ್ಮರಾಜನೇ ಸತ್ಯವನ್ನು ತಿರಸ್ಕರಿಸಿದನೆಂದಮೇಲೆ ಸತ್ಯವನ್ನುಳಿದ ಈ ಭೂಮಿಯಲ್ಲಿ ಇರಲು ಹೇಸಿ ಅಸು ನೀಗುತ್ತಾರೆ,

ಈ ದೊರೆಯ ಅಱಿಮಗನಾಂ ಮೃಷ
ವಾದಮ್ ನೋಡ ಎಂದು ಧರ್ಮಜನಂ ಮೊದಲಿಸಲ್
ಪೋದಮ್ ಪುತ್ರನಂ ಅಱಿಸಲ್
ಪೋದನೆ ಯಮಪುರಕ್ಕೆ ಮುಕ್ತಬಾಣಂ ದ್ರೋಣಂ ॥

ಗದಾಯುದ್ಧದಲ್ಲಿ ನೆಲಕ್ಕೆ ಮುಖಮಾಡಿ ಉರುಳಿಬಿದ್ದ ದುರ್ಯೋಧನ "ಕರ್ಚಿ ನೆಲನಂ ಆನ್ ಇದಂ ಎಂತುಂ ಬಿಡೆಂ" ಎಂಬ ರೀತಿಯಲ್ಲಿ ಕೆಡೆಯುತ್ತಾನೆ..... ಇಲ್ಲೆಲ್ಲ ರನ್ನನ ಉತ್ಪ್ರೇಕ್ಷೆ ಊಹಾಶಕ್ತಿಗಳು ಗರಿಗೆದರಿ ಇಡೀ ಬಾನತುಂಬ ರೆಕ್ಕೆ ಬೀಸಿ ಹಾರಾಡುತ್ತವೆ.

ರನ್ನ ತನ್ನ ಕಾವ್ಯದ ಉದ್ದಕ್ಕೂ ಕಂಡರಸಿದ ಚಿತ್ರಗಳು ಅಷ್ಟೇ ಮೋಹಕವಾಗಿವೆ. ಒಂದೊಂದು ಪದ್ಯ ಭಾಗ ಇಡೀ ಚಿತ್ರವನ್ನು ಕಣ್ಣೆದುರಿಗೆ ನಿಲ್ಲಿಸಿ, ಅವನ ಶೈಲಿಯ ಚಿತ್ರಕಶಕ್ತಿಯ ಕಲ್ಪನೆಯನ್ನು ತಂದುಕೊಡುವಂತಿವೆ.

ನೆಗಪಿವರೂಥಮಂ ವಸುಧೆ ನುಂಗಿದುದಂ, ಸಮಪಾದದಾಸನಂ ಬಗೆಗೊಳೆ, ತನ್ನಮಾಂ ತೆಗೆದ ಮುಷ್ಟಿಯೆ ದಕ್ಷಿಣಕರ್ಣಮೂಲದೊಳ್ ಸೊಗಯಿಸಲಾಗಿ ಕೇತುದಂಡವನ್ನು ನೆಮ್ಮಿನಿಂತ ಕರ್ಣನ ಚಿತ್ರವನ್ನು ಈ ಮೊದಲೇ ಕಂಡಿದ್ದೇವೆ. ಅನಂತರ,

ನರಶರಕೋಟಿ ಜರ್ಜರಿಸೆ, ತನ್ನ ಶರೀರಮಂ ಅಸ್ತ್ರವೇದನಾ ಪರವಶನಾಗಿಯುಂ, ಮಱೆದನಿಲ್ಲ ಮುಕುಂದನಂ ಏಕಚಿತ್ತದಿಂ ಸ್ಮರಿಯಿಸುತಿರ್ಪ ಆಚಾರ್ಯ ಭೀಷ್ಮರ ಚಿತ್ರ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ.

ದಿಧಿಲ್ ಬುಧಿಲ್ ಎಂಬ ಗದಾಹತಿಯಿಂದ ಉಚ್ಛಳಿತ್ ಅಸ್ರಾಂಬುವಿನಿಂದ ಮೈಮೆತ್ತಿದ ಭೀಮದುರ್ಯೋಧನರು, ಉದಯಾದ್ರಿಯುಂ ಅಸ್ತಾದ್ರಿಯುಂ ತಾಗುವಂತೆ, ವಾರಣರಕ್ತಸಿಕ್ತಮೃಗರಾಜ ಯುಗದ ಹಾಗೆ ನವಪ್ರಸೂನಾರುಣ ಕಿಂಶುಕದ್ರುಮದ ಹಾಗೆ, ಸಿಂಧುರಮೆತ್ತಿದ ಗಜರಾಜಗಳ ಹಾಗೆ ಕಾಣುತ್ತಾರೆ.

ರನ್ನನ ಬರವಣಿಗೆಯಲ್ಲಿ ಅನೇಕ ಸಲ ಅವನು ಉಪಯೋಗಿಸಿದ ವರ್ಣಗಳೇ ಪದ್ಯಗಳ ಭಾವವನ್ನು ಸೂಚಿಸುವಂತೆ ನಾದವುಳ್ಳವುಗಳಾಗಿವೆ.

ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದಾಬೀರಮಂ
ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಜಿಯೆಚ್ಚಾ ಪೊಪ್ಪ ಱಿಂ

ಎಂಬಲ್ಲಿಯ ರಭಸ,

ಚತುರಂತ ಕ್ಷಿತಿಕಾಂತೆ ಕೇಳ್, ಜಲಧಿ ಕೇಳ್, ಸಪ್ತಾರ್ಚಿಕೇಳ್
ತಾತಮಾರುತ ಕೇಳ್ ಮಾರುತ ಮಾರ್ಗ ಕೇಳ್

ಎಂಬಲ್ಲಿಯ ಆಟೋಪ,

ಇಭಶೈಲಂಗಳಂ ಏ....ಱಿ....ಏಱಿ
ರುಧಿರ ಸ್ರೋತಂಗಳಂ ದಾಂ....ಟಿ ದಾಂ....ಟಿ,
ಇಭದೋರ್ನೀಲ ಲತಾಪ್ರತಾನ ವಿಪಿನ
ವ್ರಾತಂಗಳೊಳ್ ಸಿಲ್ಕಿ....ಸಿಲ್ಕಿ....

ಎನ್ನುವಲ್ಲಿಯ ಪರಿಶ್ರಮಪೂರ್ವಕ ನಡೆ ರನ್ನನ ಶೈಲಿಯ ನಾದಗುಣದ ನಿದರ್ಶನಗಳಾಗಿವೆ.

ರನ್ನ ಸಂಸ್ಕೃತ - ಕನ್ನಡ ಉಭಯಭಾಷಾ ಪಂಡಿತ. ಕನ್ನಡದಷ್ಟೇ ಸಂಸ್ಕೃತ ಅವನ ಕರತಲಾಮಲಕ. ಅಜಿತಪುರಾಣದಲ್ಲಿಯಂತೂ ಎಷ್ಟೋ ಭಾಗಗಳು ಸಂಸ್ಕೃತ ಭಾಷೆಯಲ್ಲಿದ್ದುವೇ ಬರುತ್ತವೆ. ಗದಾಯುದ್ಧದಲ್ಲಿ ಕೂಡ ರನ್ನನಿಗೆ ಸಂಸ್ಕೃತ ಲೋಕೋಕ್ತಿಗಳೆಂದರೆ ತುಂಬಾ ಮೋಹ. ತನ್ನ ಸಂಸ್ಕೃತ ಭೂಯಿಷ್ಠವಾದ ಶೈಲಿಯ ಜೊತೆಗೆ ಈ ಸಂಸ್ಕೃತ ಲೋಕೋಕ್ತಿ-ಗಳನ್ನು ಸಾಲು ಸಾಲಾಗಿ ಸೇರಿಸಿದ್ದಾನೆ- 'ಮೃಷಾ ಪಾತಕಮ್ ಪರಮ್' 'ಮೌನಂ ಸರ್ವಾರ್ಥ ಸಾಧನಂ' 'ಆರಾಧ್ಯಮ್ ನಪ್ರಕೋಪಯೇತ್' 'ದಾನಮ್ ಪ್ರಿಯ ವಾಕ್ ಸಹಿತಂ' 'ಜ್ಞಾನಮ್ ಅಗರ್ವಮ್' 'ಗುರುವಚನಮ್ ಅಲಘಂ-ನೀಯಮ್' 'ಗಂಡಸ್ಯೋಪರಿ ಸ್ಫೋಟಕಮ್' 'ಅಶುಭಸ್ಯ ಕಾಲಹರಣಮ್' - ಎಂದು ಮೊದಲಾದುವನ್ನು ಗದಾಯುದ್ಧದಲ್ಲಿ ಕಂಡರೆ, 'ತನ್ ನಷ್ಟಂ ಯನ್ ನದೀಯತೇ' 'ಬಹುರತ್ನಾ ವಸುಂಧರಾ' 'ಗಿರೌ ವರ್ಷತಿ ವಾಸವಃ' 'ಶಾಂತಿಮ್ ಇಚ್ಛಂತಿ ಸಾಧನಃ' ಎಂದು ಮೊದಲಾದ ಸಂಸ್ಕೃತ ಲೋಕೋಕ್ತಿಗಳನ್ನು ಅಜಿತಪುರಾಣದಲ್ಲಿ ಕಾಣುತ್ತೇವೆ.

ಸಂಸ್ಕೃತದ ಈ ಬೆಡಂಗಿನ ಜತೆಗೆ ಕನ್ನಡದ ಪೊಸದೇಸೆಯೂ ರನ್ನನ ಶೈಲಿಯ ಲಕ್ಷಣ. ಕನ್ನಡದ ಈ ದೇಸಿ ಅವನ ಕಾವ್ಯದಲ್ಲಿ ಅನೇಕ ಕಡೆಗೆ ವ್ಯಕ್ತವಾಗಿದೆ.

i ಇಂದಾನಾದೆಂ ಮೇಣ್ ಇನನಂದನ ಕೇಳ್
ಪಾಂಡುತನಯರಾದರ್

ii ಎನಗೆ ತೋರಿಬಿಡು ಕೌರವನಂ

iii ಅವರಿರ್ಬರುಮಂ ಇಕ್ಕುವೆಂ

iv ಪಾಂಡವರಾದರ್ ಆಂ ಆದೆಂ

v ಈವುದು ಅರ್ಧರಾಜ್ಯಮಂ ಎಂದು ಕಾಲ್ವಿಡಿದು ಬೇಡಿದವ್

( ಅಜಿತ ಪುರಾಣದಲ್ಲಿಯೂ

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆ ಎನ್ನುಕ್ತಿಗೆ ಒಡಂ
ಬಡು ಜೀವ ನಿನ್ನಕಾಲಂ
ಪಿಡಿವೆಂ...........

ಎಂದು ಬರುತ್ತದೆ. ಜೀವಕ್ಕೂ ಕಾಲಿವೆ- ! )

ಅಲ್ಲದೆ, ವೈಶಂಪಾಯನ ಸರೋವರದ ಮಳಲು 'ಪುರಿಗಡಲೆಗೆ ಪುರಿದ ಮಟಲ್ ಕಾಯ್ವ' ತೆರದೆ ಕಾಯುತ್ತಿದೆ. ಭೀಮ ಕೋಪಾಟೋಪದ ಮೂಲಕ ನೀರು 'ಎಸರ್ಕಾಯ್ದಿಟ್ಟ' ತೆರದೆ ಕಾಯುತ್ತದೆ. ಅಲ್ಲಿಯ ಮೀನುಗಳು 'ಕೂಟ್ ಕುದಿವಂತೆ' ಕುದಿಯುತ್ತವೆ. ಅಭಿಮನ್ಯುವನ್ನು ಪೆತ್ತವಳ್ ಮೊಲೆವೆತ್ತಳಲ್ಲ; ವೀರ ಜನನಿವೆಸರಂ ಪೆತ್ತಳ್.

ಅಜಿತಪುರಾಣದಲ್ಲಿಯೂ ಸಹ-

ಮೊಲೆವೊತ್ತ ತೈಲ ಜನನಿಯ
ಕಿಲದೊಳ್ ರಂಜಿಪರೆ ಮೀಸೆವೊತ್ತ ಅಣ್ಣಂಗಳ್ ?

ಎಂದು ಪ್ರಯೋಗ ಬರುತ್ತದೆ. ರಾಜ್ಯಲಕ್ಷ್ಮಿ 'ಅತ್ತ ಪುಲಿ ಇತ್ತ ದರಿ' ಎಂದು ಪರಿತಪಿಸುತ್ತಾಳೆ.

ರನ್ನನ ಅನೇಕ ವಾಕ್ಯಗಳಿಗೂ ಗಾದೆಯ ಮಾತಿನ ಸಾಮರ್ಥ್ಯವೇ ಇದೆ. ಯುಗದ ಜ್ಞಾನ ಒಂದು ಸಾಲಿನಲ್ಲಿ ಘನೀಕೃತವಾಗಿ ಗಾದೆಯಾದರೆ ರನ್ನನಲ್ಲಿ ಅಂಥ ಅನೇಕ ವಾಕ್ಯಗಳನ್ನು ಕಾಣುತ್ತೇವೆ.

ಕಯ್ಪೆ ಸೊರೆಯ ಕುಡಿಯೇಂ ಮಿಡಿಯೇಂ? ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಕ್ಕುಮೆ? ಕಪಿಗೆ ಚಪಲತೆ ಸಹಜಂ; ಕೆಡದ ಕಸವರಂ ಜಸಂ; ಗತಕಾಲಂ ಲಯಕಾಲಮಾಯ್ತು – ಇಂಥ ಹತ್ತಾರು ವಾಕ್ಯಗಳನ್ನು ಹೇಳಬಹುದು.

ಅಜಿತಪುರಾಣದಲ್ಲಿ ರನ್ನ ತನ್ನ ಬಗೆಗೆ ಹೇಳಿಕೊಳ್ಳುವ ಸಮಾಪ್ತಿ ಪದ್ಯಗಳಲ್ಲಿ ತನ್ನ ವ್ಯಾಕರಣ ದೃಷ್ಟಿಯನ್ನು ಹೇಳಿದ್ದಾನೆ.

ಅಭಿಮತ ಜೈನೇಂದ್ರ ವಚೋ
ವಿಭವಂ ಶಬ್ದಾನುಶಾಸನ ಪ್ರಭವ ವಚೋ
ವಿಭವಂ ಒಡನೆಸೆಯೆ ರಂಜಿಪಂ
ಉಭಯ ವ್ಯಾಕರಣ ಪಂಡಿತಂ ಕವಿರತ್ನಂ

ಎಂದು ಹೇಳಿಕೊಂಡಿದ್ದಾನೆ. ಇವನ ಬಗೆಗೆ ಜನ್ನನು ಹೇಳುವಾಗಲೂ 'ರನ್ನಂ ವೈಯಾಕರಣಂ; ಜನ್ನಂ ಮೇಣ್ ಕವಿಗಳೊಳ್ ವೈಯಾಕರಣಂ' ಎಂದು ಹೇಳಿದನು. ರನ್ನನು ರಚಿಸಿದ ವ್ಯಾಕರಣಗ್ರಂಥ ನಮಗೆ ದೊರಕಿಲ್ಲ. ದೊರಕಿದ್ದರೆ, ಕವಿರಾಜಮಾರ್ಗ, ಶಬ್ದಸ್ಮೃತಿ, ಭಾಷಾಭೂಷಣ, ಶಬ್ದಮಣಿದರ್ಪಣಗಳಲ್ಲಿ ಕಂಡುಬರುವ ಸೂತ್ರವಿಭೇದಗಳ ಕಾರಣ ಮೀಮಾಂಸೆಗೂ ಅನುಕೂಲವಾಗುತ್ತಿತ್ತು.

೧೩ನೆಯ ಶತಮಾನದ ಕೇಶಿರಾಜ ಕನ್ನಡ ವಿಭಕ್ತಿಪ್ರತ್ಯಯಗಳ ಬಗ್ಗೆ ಹೇಳುವಾಗ 'ಮಮಿಂಕೆ ಅದದೊಳ್' ಎನ್ನುವವು ಕನ್ನಡದ ಸಪ್ತವಿಧ ವಿಭಕ್ತಿಗಳೆಂದು ಹೇಳುತ್ತಾನೆ. ಆಧುನಿಕರು ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಸೂಚಕವಾಗಿ ಪ್ರತ್ಯೇಕ ಪ್ರತ್ಯಯವಿರದೆ, ಪ್ರಕೃತಿಯೇ ಪ್ರಥಮಾ ವಿಭಕ್ತಿಯ ಅರ್ಥವನ್ನು ಸೂಚಿಸುತ್ತದೆಂದು ಹೇಳುತ್ತಾರೆ. ಈ ಬಗೆಗೆ ರನ್ನನ ಅಭಿಪ್ರಾಯಗಳೇನಾದರೂ ಇದ್ದುವೇ? ನಮಗೆ ತಿಳಿದುಕೊಳ್ಳಲು ಆಧಾರಗಳಿಲ್ಲ. ಅವನ

ವ್ಯಾಕರಣಗ್ರಂಥ ದೊರಕಿದ್ದರೆ ಚೆನ್ನಾಗಿರುತ್ತಿತ್ತು. ಆದರೂ, ರನ್ನನು ಅಲ್ಲಲ್ಲಿ ಪ್ರಥಮಾ ವಿಭಕ್ತಿಯ ಪ್ರತ್ಯಯವನ್ನು ಬಳಸದೆ, ಕೇವಲ ಪ್ರಕೃತಿರೂಪವನ್ನು ಮಾತ್ರ ಬಳಸಿದ್ದನ್ನು ಕಂಡರೆ ಬಹುಶಃ ರನ್ನ ಇಂಥ ಪ್ರಯೋಗಗಳನ್ನು ಒಡಂಬಡುತ್ತಿದ್ದನೇನೋ ಎನ್ನಿಸುತ್ತಿದೆ. ಸುಪ್ರಸಿದ್ಧವಾದ ಪ್ರಾರಂಭದ ಪದ್ಯಗಳನ್ನು ಗಮನಿಸಿದರೇ ಈ ಮಾತು ಗಮನಕ್ಕೆ ಬರಬಹುದು.

ಕೃತಿ ನೆಗಟ್ದಿ ಗದಾಯುದ್ಧಂ
ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ

'ಕೃತಿಗೀಶ್ವರಂ' ಎಂದು ಬೇಕಲ್ಲವೇ ? ರನ್ನನಂಥ ಮಹಾಕವಿಯು ಛಂದಸ್ಸಿನ ಬಾಧೆಗೆ ಒಳಗಾಗಿ ಬಿಂದುವನ್ನು ಬಿಟ್ಟನೆಂದು ಹೇಳಬೇಕಾದೀತೇ ? ವಿಚಾರ ಮಾಡಬೇಕು.

ಅದರಂತೆಯೇ, 'ಣೋ ನಸ್ಯ ಣೋಃ' ಎಂದು ಭಾಷಾಭೂಷಣಕಾರನು ಹೇಳಿದ್ದಾನೆ. ಕಣ್ಣೀರು, ಪೆಣ್ಣಾಯಿ, ಇತ್ಯಾದಿ. ಕೇಶಿರಾಜನು ಈ ಸೂತ್ರವನ್ನು ಹೇಳಿದ್ದರೂ 'ಉಚ್ಚರಿಸುವರ್ಗೆ ದುಷ್ಕರಂ ಅದುವುಂ' ಎಂದಾದುದರಿಂದ ಇಂಥ ಪ್ರಯೋಗಗಳನ್ನು ಸಮ್ಮತಿಸಲಿಲ್ಲ. ರನ್ನನಲ್ಲಿ "ಸೊಗಯಿಪ ನಗೆಗಣ್ಣೋಟವಿಂತಾಗವೇಡಾ" ಎಂಬ ಪ್ರಯೋಗವನ್ನು ಕಾಣುತ್ತೇವೆ ಎಂದು ತಿಳಿದೇ 'ಕಡೆಗಣ್ಣೊಪ್ಪ' ಎಂಬ ಪಾಠಾಂತರವೂ ಉಂಟಾಯಿತೇನೋ !

ಅದರಂತೆಯೇ, ವಿಶಂಕೆಯನ್ನು ಹೇಳುವಲ್ಲಿ ಆ ವಿಶಂಕೆಯ ಅರ್ಥಕ್ಕೆ ಬಾಧೆ ಬರಬಾರದೆಂದೇನೋ ದರ್ಪಣಕಾರನು ವಿಸಂಧಿಯನ್ನು ವಿಧಿಸಿದ್ದಾನೆ. ಆನೆಯೋ ಅದ್ರಿಯೋ ಎಂಬುದು ಆನೆಯದ್ರಿಯೋ ಎಂದಾಗದು. ೯ ನೆಯ ಶತಮಾನದ ನೃಪತುಂಗನು ಕೂಡ ಇಂಥ ಸಂಧಿಪ್ರಕ್ರಿಯೆಯನ್ನು ಕಾವ್ಯದೋಷವಾಗಿ ಪರಿಗಣಿಸಿದ್ದಾನೆ. 'ದಿವಿಜನೋ ಫಣಿನಾಯಕನೋ ಮನೋಭವನೋ ಇವಮ್' ಎಂದೆನ್ನಬೇಕೇ ಹೊರತು, 'ಮನೋಭವನಿವಂ' ಎಂದು ಲೋಪಸಂಧಿ ಮಾಡಿದರೆ, ವಿಶಂಕೆಯ ಭಾವ ಸ್ಪಷ್ಟವಾಗಿ ಸಾಮಾನ್ಯಾರ್ಥವನ್ನು ಕೊಡಬಹುದು, ಅಂತಲೇ ನೃಪತುಂಗ ಕೇಶಿರಾಜಾದಿಗಳು ಇಂಥ ಪ್ರಯೋಗಗಳನ್ನು ನಿಷೇಧಿಸಿದರು. ರನ್ನನಲ್ಲಿಯಾದರೋ ಒಂದು ಕಡೆಗಾದರೂ ಇಂಥ ಸಂಧಿಪ್ರಕ್ರಿಯೆ ಮಾಡಿದ್ದನ್ನು ಕಾಣಬಹುದು. ಕೌರವ್ಯರನ್ನೆಲ್ಲ ಕೊಂದು ಗಾಂಧಾರಿಯೆಡೆಗೆ ಬಂದ ಭೀಮಸೇನನನ್ನು ಗಾಬರಿಯಿಂದ ನೋಡಿದ ಗಾಂಧಾರೀದೇವಿ—

"ಬಾಹು ಭ್ರಮಿತ ಅಭ್ರ ವಿಭ್ರಮಗದಂ ಕೌರವ್ಯರಂ ತಿಂದ ರಕ್ಕಸನೋ ಈತನೋ ಭೀಮಸೇನನೆನೆಸುತುಂ" ಎಂದು ಹೇಳುವಲ್ಲಿ ಮೂಲದ ಸಂದೇಹಾಲಂಕಾರಕ್ಕೆ ಬಾಧೆ ಬರುತ್ತದೆ. ಎಂತಲೇ, 'ಭೀಮನೊ ಈತನಾವಂ ಎನುತುಂ' ಎಂಬ ಪಾಠಾಂತರ ಉಂಟಾದಂತೆ ಕಾಣುತ್ತದೆ.

ಇವೆಲ್ಲ ಮಹಾಸಾಮ್ರಾಜ್ಯವನ್ನು ಗೆಲ್ಲುವಾಗ ಹಾಗೇಗೆ ಬಿದ್ದ ಖಡ್ಗದ ಒರಸೆಗಳು. ಇವನ್ನೇ ಬದಲಿಸಿ ಹೇಳಬೇಕಾದರೆ ಫಣಿಪತಿಯ ಫಣಾರತ್ನವನು ಪರೀಕ್ಷಿಸುವ ಸಾಹಸಕ್ಕೆ ಕೈಯಿಕ್ಕಿದ್ದಾದರೆ–ನಮಗೂ 'ಎಂಟೆರ್ದೆ' ಬೇಕಾದೀತು.

ರನ್ನನಲ್ಲಿ ನವ್ಯೋನವವಾಗಿ ಕಾಣುವ ಪಾತ್ರಸೃಷ್ಟಿಯ ಬಗೆಗೆ ಇಲ್ಲಿ ನಾನು ಹೇಳಬಯಸುವದಿಲ್ಲ. ಒಬ್ಬ ದುರ್ಯೋಧನನ ವಿಷಯವನ್ನೇ ತೆಗೆದುಕೊಂಡರೆ "ಭೀಮ ಗೆದ್ದು ಸೋತ; ಕೌರವ ಸೋತು ಗೆದ್ದ" ಎಂಬ ಅಭಿಪ್ರಾಯ ಒಂದೆಡೆಗಿದ್ದರೆ, "ಜೀವನದಲ್ಲಿ ಗೆದ್ದೆತ್ತಿನ ಬಾಲವನ್ನು ಹಿಡಿಯುವವರಿದ್ದರೆ, ಸಾಹಿತ್ಯದಲ್ಲಿ ಸೋತೆತ್ತಿನ ಕೊಂಬು ಎತ್ತುವ ಜನ ಬಹಳ" ಎಂಬ ತೀರ ಭಿನ್ನವಾದ ಅಭಿಪ್ರಾಯವೂ ಇದೆ. ಎಂದೋ ಸತ್ತುಹೋದ ಒಬ್ಬ ವ್ಯಕ್ತಿಯ ಬಗೆಗೆ ಇಷ್ಟು ತೀರ ಭಿನ್ನವಾದ ಅಭಿಪ್ರಾಯಗಳು ಇವೆಯೆಂಬುದೂ ರನ್ನನ ಸಜೀವ ಪಾತ್ರಸೃಷ್ಟಿಗೆ ನಿದರ್ಶನವಾಗಿವೆ. ಪಾತ್ರದ ಬೆಳವಣಿಗೆ ನಿಂತು ಅವುಗಳಿಗೆ Label ಹಚ್ಚುವ ಸ್ಥಿತಿ ಉಂಟಾದರೆ, ಜೀವನ ಲೆಖ್ಖಾಚಾರದ ಗಣಿತವಾದೀತು. ಜೀವನ ಇಂಥ ಬೀಜಗಣಿತವಲ್ಲ. $A^2 - B^2 = a - b \times a + b$ ಎಂದು ಇಲ್ಲಿ ಗಣಕವನ್ನು ಹೇಳಲಿಕ್ಕೆ ಬರುವದಿಲ್ಲ. ಗಣಿತದಲ್ಲಿ ಏನೇ ಇರಲಿ, ಸಾಹಿತ್ಯದಲ್ಲಿ ಹಲವು ೨+೩ ಐದೂ ಆಗಬಹುದು; ನಾಲ್ಕಕ್ಕೂ ಇಳಿಯಬಹುದು; ಆರಕ್ಕೂ ಒಲೆಯಬಹುದು. ಅಂತಲೇ ನವ್ಯೋನ್ಮೇಷಶಾಲಿಯಾಗಿ ಕಾಣುವ ರನ್ನನ ಪಾತ್ರಗಳೆಲ್ಲ ಜೀವನದಲ್ಲಿಯ ನಮ್ಮ ನಿತ್ಯ ಪರಿಚಯದಂತೆ ಕಂಡೂ, ಗೂಢಾತ್ ಗೂಢತರವಾಗಿ ತೋರುತ್ತಾರೆ. ಇದೇ ರನ್ನನ ಪಾತ್ರರಚನಾಕೌಶಲದ ಶ್ರೇಯಸ್ಸು........

ಗದಾಯುದ್ಧವೇನೋ ಮುಗಿಯಿತು. "ಕುರುಕುಲಾರ್ಕನುಂ ಅರ್ಕನುಂ ಅಸ್ತಮೆಯ್ದಿದರ್." ದುರ್ಯೋಧನ ಸತ್ತ. ಭೀಮಸೇನ ಪಾಂಡವಾದಿಗಳು ಬದುಕಿ ಉಳಿದರು. ಹಾಗಿದ್ದರೆ, ಈ ಗದಾಯುದ್ಧದ ಸಂದೇಶವೇನು ? ಬರಿಯ ಒಬ್ಬ ದುರ್ಯೋಧನನನ್ನು ಕೊಲ್ಲುವುದೇ ಮಹಾಭಾರತದ ಗುರಿ-

ಯಾಗಿದ್ದರೆ ಅದನ್ನು ಹೇಗೋ ಪೂರೈಸಬಹುದಾಗಿತ್ತು. ಆದರೆ, ಅದು ಸಂಕ್ಷಿಪ್ತ ಭಾರತವಾಗುತ್ತಿತ್ತೇ ವಿನಃ ಮಹಾಭಾರತವಾಗುತ್ತಿರಲಿಲ್ಲ.

ಹಾಗಿದ್ದರೆ ಗದಾಯುದ್ಧವೇನು ಅಣ್ಣತಮ್ಮಂದಿರ ಭ್ರಾತೃಕಲಹವೇ? ನೆಲ-ಅಧಿಕಾರಗಳ ಸೆಣಸಾಟವೇ? ಬಲಿತವರ ಬಾಹುತೀಟೆಯೇ? ಹೊತ್ತು ಹೋಗದ ಜನ ಆಡಿದ ಆಟವೇ? ಎಂದು ಗಮನಿಸಿದರೆ, ಗದಾಯುದ್ಧ ನಿಜವಾಗಿ ಯುದ್ಧವಲ್ಲ; ದೇವತಾರ್ಚನೆ ಎಂದು ಕಂಡುಬರುತ್ತದೆ. ಅದು ಧರ್ಮ-ಅಧರ್ಮ; ನೀತಿ-ಅನೀತಿ; ಅಹಂಕಾರ-ಸೌಜನ್ಯ; ಪೃಥಃಕ್ಕರಣ-ಸಮೀ-ಕರಣ; ಇವುಗಳ ನಡುವಿನ ನಿತ್ಯನವೀನವಾದ ಸಂಘರ್ಷವಾಗಿದೆ. ಅದು ಅಂದಿನಿಂದ ಇಂದಿಗೂ ನಡೆದ ಯುದ್ಧ; ದೇವಪೂಜೆ. ಅಂತಲೇ, ರನ್ನನ ಭೀಮಸೇನ ಅದನ್ನು ಸರಿಯಾಗಿಯೇ ಯಜ್ಞಕಾರ್ಯಕ್ಕೆ ಹೋಲಿಸಿದ್ದಾನೆ—

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮ್ ಎಮ್ಮೆನಾಲ್ವರುಂ ಸಂಗರಾ-
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗ್ರಹೀತವ್ರತಾ-
ಚರಣವ್ಯಾಪಿಕೆಯುಂ ಭವತ್ಸಂಭವಂ ಸಂಚಾರಕಂ ಕೌರವೇ-
ಶ್ವರನೀತಂ ಪಶುವಾಗೆ ಬೇಳ್ದೆನವನಂ ಕೋಪಾಗ್ನಿಯಿಂದಗ್ನಿಜೇ

ಭೀಮಸೇನನೇನೋ ಅಂದಿನ ಭಾರತ ಯುದ್ಧದಲ್ಲಿ ಕೌರವನನ್ನು ಕೊಂದು ಹಾಕಿದನು. ಆದರೆ, ದ್ವೇಷ-ಮದ-ಮಾತ್ಸರ್ಯ ಅಸಹನೆ-ಛಲಗಳ ಕೌರವ್ಯತನ ಭೂಮಿಯಿಂದ ನಷ್ಟವಾಯಿತೇ? ಇಂದಿನ ಮಹಾಭಾರತದಲ್ಲಿಯೂ ಒಳಿತು-ಕೆಡಕುಗಳ ದಿನ ನಿತ್ಯದ ಮಹಾಭಾರತ ನಡೆದೇ ಇದೆ. ಎಂಥ ಭೀಮಸೇನ-ನೆದುರಿಸಿದರೂ, ದುರ್ಯೋಧನತ್ವ ದುರ್ಯೋಧನವಾಗಿಯೇ ಉಳಿದಿದೆ. UNESCO ಧ್ಯೇಯ ಘೋಷಣೆಯಾದರೂ ಹೇಳುವದೇನು?

"Wars begin in the minds of men; it is there that the citadels of peace should be constructed."

# ರನ್ನನ ಕಾವ್ಯಗಳಲ್ಲಿ ಪಾತ್ರ ನಿರೂಪಣೆ

ರನ್ನಕವಿ ಕನ್ನಡ ಕಾವ್ಯಪ್ರಪಂಚದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದ ನಾಲ್ಕಾರು ಕವಿಶ್ರೇಷ್ಠರಲ್ಲಿ ಒಬ್ಬನಾಗಿದ್ದಾನೆ. ನಾಟಕೀಯ ಗುಣದಲ್ಲಿಯೂ, ಶೈಲಿಯ ಓಜಸ್ಸಿನಲ್ಲಿಯೂ ಅವನಿಗೇ ಕನ್ನಡ ಕವಿಗಳಲ್ಲಿ ಅಗ್ರಪೂಜೆ ಸಲ್ಲಬೇಕು. ಪಾತ್ರಸೃಷ್ಟಿಯಲ್ಲಿಯೂ ರನ್ನನು ಎಣೆಯಿಲ್ಲದ ಕೌಶಲ್ಯವನ್ನೂ ಮಾನವ ಸ್ವಭಾವದ ಸೂಕ್ಷ್ಮಪರಿಜ್ಞಾನವನ್ನೂ ತೋರಿಸುತ್ತಾನೆ. ಅವನು ಸೃಷ್ಟಿಸಿದ ಅನೇಕ ಪಾತ್ರಗಳು ಜೀವಕಳೆ ತುಂಬಿ ನಮ್ಮ ಮನದಲ್ಲಿ ನೆಲೆಯೂರಿ ನಿಲ್ಲುತ್ತವೆ.

ಕಥಾಪ್ರಧಾನವಾದ ಸಾಹಿತ್ಯದಲ್ಲಿ ಅದು ಕಾವ್ಯವೇ ಇರಲಿ, ನಾಟಕವೇ ಇರಲಿ, ಕಾದಂಬರಿಯೇ ಇರಲಿ, ಸಣ್ಣ ಕಥೆಯೇ ಇರಲಿ, ಪಾತ್ರರಚನಾ-ನೈಪುಣ್ಯವು ಅತ್ಯಂತ ಮಹತ್ವದ ಸ್ಥಾನವನ್ನು ಹೊಂದುತ್ತದೆ. ಏಕೆಂದರೆ ಲೇಖಕನು ಅವುಗಳಲ್ಲಿ ತನ್ನ ಕಲ್ಪನಾವಿಲಾಸದಿಂದ ಅನೇಕ ವ್ಯಕ್ತಿಗಳನ್ನು, ಭಿನ್ನ ಭಿನ್ನ ಪ್ರಕೃತಿಯ ವ್ಯಕ್ತಿಗಳನ್ನು, ಸೃಷ್ಟಿಸಬೇಕಾಗುತ್ತದೆ. ಇಲ್ಲಿಯ ಕಲ್ಪನಾಲೋಕದ ವ್ಯಕ್ತಿಗಳು ನಮ್ಮ ಮನಸ್ಸಿಗೆ ಸತ್ಯವೆಂದೆನಿಸುವಂತೆ ಚಿತ್ರಿತರಾಗಿರಬೇಕು. ಅವರ ಗುಣಧರ್ಮಗಳಿಗೂ ಅವರು ಎಸಗುವ ಕೃತಿಗಳಿಗೂ ಒಂದು ರೀತಿಯ ಸಾಮಂಜಸ್ಯವಿರಬೇಕು. ಮನುಷ್ಯಸ್ವಭಾವವು ಅನಂತ ವೈವಿಧ್ಯಗಳುಳ್ಳದ್ದು. ಎಲ್ಲ ಪ್ರಕಾರಗಳ ಸ್ವಭಾವವೈಚಿತ್ರ್ಯಗಳನ್ನು ಒಬ್ಬನೇ ಕವಿ ನಿರೂಪಿಸುವುದು ಅಸಾಧ್ಯವಾದ ಮಾತು. ಒಬ್ಬೊಬ್ಬ ಕವಿ, ಇಲ್ಲವೆ ಲೇಖಕ ತನ್ನ ಪರಿಮಿತಿಗನು ಸಾರವಾಗಿ ತಾನು ಚಿತ್ರಿಸಬೇಕಾದ ವ್ಯಕ್ತಿಗಳನ್ನು ಆರಿಸಿಕೊಳ್ಳುತ್ತಾನೆ. ಹೀಗೆ ಆರಿಸಿಕೊಂಡ ಎಲ್ಲ ವ್ಯಕ್ತಿಗಳನ್ನು ಅವನು ಸಮಗ್ರವಾಗಿಯೂ, ಸುಸಂಬದ್ಧವಾಗಿಯೂ ಚಿತ್ರಿಸುತ್ತಾನೆಂದು ಹೇಳಲಾಗುವದಿಲ್ಲ. ಆತನ ಅಭಿರುಚಿ, ಶಕ್ತಿಗಳಿಗನುಸಾರವಾಗಿ ಕೆಲವೊಂದು ಪ್ರಕಾರಗಳ ಪಾತ್ರಗಳ ಚಿತ್ರಣದಲ್ಲಿ ಯಶವನ್ನು ಪಡೆಯುತ್ತಾನೆ. ಕೆಲವೊಂದರಲ್ಲಿ ಅವನ ಕಾರ್ಯ ಅಷ್ಟೇನು ಸಫಲತೆಯನ್ನು ಪಡೆಯುವದಿಲ್ಲ,

ಕಥಾಸಾಹಿತ್ಯದ ಅಂತಿಮ ಸಫಲತೆಯು ಹೆಚ್ಚಾಗಿ ಪಾತ್ರ ಸೃಷ್ಟಿಯನ್ನೇ ಅವಲಂಬಿಸಿರುತ್ತದೆ. ಏಕೆಂದರೆ, ಇಂಥ ಸಾಹಿತ್ಯದಲ್ಲಿ ನಮ್ಮ ಲಕ್ಷ್ಯವೂ, ಕುತೂಹಲವೂ ಮುಖ್ಯವಾಗಿ ಅಲ್ಲಿಯ ವ್ಯಕ್ತಿಗಳೆಲ್ಲರ ಮೇಲೆ ಕೇಂದ್ರೀಕೃತ ವಾಗಿರುತ್ತದೆ. ಆ ಕಾಲ್ಪನಿಕ ವ್ಯಕ್ತಿಗಳ ಸ್ವಭಾವ ವೈಚಿತ್ರ್ಯಗಳಲ್ಲಿಯೂ, ಅವರ ಸುಖದುಃಖಗಳಲ್ಲಿಯೂ, ಅವರು ಎಸಗುವ ಕೃತಿಗಳಲ್ಲಿಯೂ ನಾವು ಆಸ್ಥೆ ಯನ್ನು ತಳೆಯುತ್ತೇವೆ. ಅನೇಕ ವೇಳೆ ನಮ್ಮ ಪರಿಚಯದ ಸಜೀವ ವ್ಯಕ್ತಿ ಗಳಿಗಿಂತಲೂ ಈ ಕಲ್ಪನಾ ಪ್ರಪಂಚದ ವ್ಯಕ್ತಿಗಳೇ ನಮಗೆ ಹೆಚ್ಚು ಹತ್ತಿರದ ವರಾಗುತ್ತಾರೆ. ಹೀಗೆ ವಾಚಕರ ಕೂತೂಹಲವು ಕೆರಳಬೇಕಾದರೆ, ಅವರ ಸಂಪೂರ್ಣ ಸಹಾನುಭೂತಿ ಪಾತ್ರಗಳಲ್ಲಿ ಉಂಟಾಗಬೇಕಾದರೆ, ಲೇಖಕನು ತಾನು ಸೃಷ್ಟಿಸುವ ಆಯಾ ಪಾತ್ರಗಳಲ್ಲಿ ಪೂರ್ತಿಯಾಗಿ ಸಮರಸನಾಗಬೇಕಾ ಗುತ್ತದೆ. ನಿಜವಾದ ಮಹಾಕವಿ ತಾನು ಸೃಷ್ಟಿಸಿದ ಎಲ್ಲಾ ಪಾತ್ರಗಳಲ್ಲಿಯೂ ಅಧಿಷ್ಠಿತನಾಗಿರುತ್ತಾನೆ. ಅವರ ಅಂತರ್ಯದ ಎಲ್ಲಾ ಗೂಢಗಳೂ ಅವನಿಗೆ ಅವಗತವಾಗಿರುತ್ತವೆ. ಈ ಪಾತ್ರಗಳನ್ನು ನಮ್ಮ ಮನೋರಂಗದಲ್ಲಿ ಕುಣಿಸಿ ಅವರ ಅಂತರಂಗವನ್ನೆಲ್ಲ ಬಹಿರಂಗ ಪಡಿಸಿ ಅವರೊಂದಿಗೆ ನಾವೂ ತಾದಾತ್ಮ್ಯ ಹೊಂದುವಂತೆ ಮಾಡಬಲ್ಲವನೇ ನಿಜವಾದ ಮಹಾಕವಿ. ನಮ್ಮ ರನ್ನನು ಇಂಥ ಒಬ್ಬ ಮಹಾಕವಿಯೆಂಬುದು ಅವನ ಕೃತಿಗಳನ್ನು ಸಹೃದಯತೆಯಿಂದ ಅವಲೋಕಿಸಿದವರೆಲ್ಲರಿಗೂ ವಿದಿತವಾಗದೆ ಇರದು.

ನಮಗೆ ಉಪಲಬ್ಧವಾದ ರನ್ನನ ಕೃತಿಗಳು ಎರಡು ಮಾತ್ರ - ಅಜಿತ ಪುರಾಣ ಮತ್ತು ಗದಾಯುದ್ಧ. ಆವನು ರಚಿಸಿದ ಇನ್ನೆರಡು ಕಾವ್ಯಗಳು— ಪರಶುರಾಮ ಚರಿತ, ಚಕ್ರೇಶ್ವರ ಚರಿತ – ಇವು ನಮಗೆ ಸಿಕ್ಕಿಲ್ಲ. ನಮಗೆ ದೊರೆತ ಎರಡು ಕೃತಿಗಳಲ್ಲಿ ರನ್ನನ ಪಾತ್ರನಿರ್ಮಾಣ ಕೌಶಲವು ಯಾವ ಮಟ್ಟದ್ದೆಂದು ಪರೀಕ್ಷಿಸೋಣ. ರನ್ನನು ತನ್ನ ಕಾವ್ಯವನ್ನು 'ಪರೀಕ್ಷಿಪಂ ಗೆಂಟೆರ್ದಯೇ' ಎಂದು ಹೆದರಿಸಿದ್ದಾನೆ. ಆದರೆ ನಾವೇನು ಅಂಜುವ ಕಾರಣ ವಿಲ್ಲ; ನಮಗೂ ಅವನಿಗೂ ೯೦೦ ವರ್ಷಗಳ ಅಂತರವಿದೆ.

ಅಜಿತಪುರಾಣದ ಪಾತ್ರವಿವೇಚನೆಯನ್ನು ಸಂಕ್ಷೇಪವಾಗಿ ಮುಗಿಸ ಬಹುದು. ಏಕೆಂದರೆ ಅದೊಂದು ಮತವನ್ನು ವಿವರಿಸುವ ಪುರಾಣವಾಗಿದ್ದು-

ದರಿಂದ ಅಲ್ಲಿ ರನ್ನನಿಗೆ ಅಷ್ಟು ಸ್ವಾತಂತ್ರ್ಯವಿಲ್ಲ. ಕೆಲವೊಂದು ನಿಯತವಾದ ವಿಷಯಗಳು ನಿಯತವಾದ ರೀತಿಯಲ್ಲಿ ಬರಲೇಬೇಕೆಂಬ ಕಟ್ಟುನಿಟ್ಟಾದ ನಿರ್ಬಂಧಗಳು ಜೈನ ಪುರಾಣಕರ್ತೃಗಳಿಗೆ ಇದ್ದುವು. ಅಲ್ಲದೆ ವೀತ-ರಾಗತೆಯೇ ಗುರಿಯಾಗಿರುವ ಜೈನ ಪುರಾಣಗಳಲ್ಲಿ ರಾಗದ್ವೇಷಾದಿ ಮನುಷ್ಯ ಸಹಜವಾದ ಗುಣಗಳ ಪ್ರದರ್ಶನಕ್ಕೆ ಬಹಳಷ್ಟು ಅವಕಾಶವಿಲ್ಲ. "ಜಿತಕಂದರ್ಪ ಮೆನಿಪ್ಪ ಶಾಂತರಸಮೆತ್ತ ? ಉದ್ದಾಮ ಶೃಂಗಾರಮೆತ್ತ? ಕಿಂಕೇನ ಸಂಗತಂ?" ಎಂದೂ ಕವಿ ಕೇಳುತ್ತಾನೆ.

ಅಜಿತಪುರಾಣದಲ್ಲಿ ನಮ್ಮ ಕಣ್ಣೆದುರಿಗೆ ಸ್ಫುಟವಾಗಿ ನಿಲ್ಲುವ ವ್ಯಕ್ತಿ ಮುಖ್ಯ ಕಥೆಗೆ, ಪುರಾಣಕ್ಕೆ ಸಂಬಂಧಿಸಿದ ವ್ಯಕ್ತಿಯಲ್ಲ. ಪೀಠಿಕಾ ಪ್ರಕರಣ-ದಲ್ಲಿಯೂ ಕೊನೆಯ ಆಶ್ವಾಸದಲ್ಲಿಯೂ ವರ್ಣಿತಳಾದ ರನ್ನನ ಆಶ್ರಯದಾತ್ರಿ ಯಾದ ಅತ್ತಿಮಬ್ಬೆಯು ನಮ್ಮ ಮನಸ್ಸನ್ನು ಹೆಚ್ಚಾಗಿ ಸೆಳೆಯುತ್ತಾಳೆ. ಈ ಐತಿಹಾಸಿಕ ವ್ಯಕ್ತಿಯನ್ನು ರನ್ನನು ಅತ್ಯಂತ ಉತ್ಸಾಹದಿಂದಲೂ ಆದರದಿಂದಲೂ ಚಿತ್ರಿಸಿದ್ದಾನೆ. ಅತ್ತಿಮಬ್ಬೆ ನಮಗೆ ಬಹಳ ಹತ್ತಿರದವಳಾಗುತ್ತಾಳೆ—ರನ್ನನ ಕುಶಲ ಚಿತ್ರಣದಿಂದ.

ಅತ್ತಿಮಬ್ಬೆ ಜೈನಧರ್ಮದಲ್ಲಿ ಗಾಢವಾದ ನಿಷ್ಠೆಯುಳ್ಳ ಮಹಿಳೆ. ವೈಧವ್ಯ ದುಃಖವು ಅವಳಿಗೆ ಬಂದೊದಗಿದ್ದರಿಂದ ಅನೇಕ ವ್ರತ-ನಿಯಮ-ಉಪವಾಸ ಗಳಿಂದ ತನ್ನ ದೇಹವನ್ನು ದಂಡಿಸುತ್ತ ಧರ್ಮನಿರತೆಯಾಗಿ ಬಾಳಿದಳು. 'ಒಡಲನುಪವಾಸದಿಂ ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬ-ಡೆದಳ್.' ಆಕೆಯು ಅನೇಕ ಪ್ರಕಾರದ ದಾನಗಳನ್ನು ಮಾಡುತ್ತಿದ್ದಳು. ಅವಳನ್ನು ದಾನ 'ಚಿಂತಾಮಣಿ' ಎಂದು ರನ್ನ ಕರೆಯುತ್ತಾನೆ. 'ಅರ್ಥಿಜನರಿಗೆ ಕೊಟ್ಟದ್ದೇ ನಿಜವಾದ ಧನ; ಕೊಡದೆ ಇದ್ದುದು ಕೆಟ್ಟುದು; ಕೊಡದೆ ಇದ್ದುದು ನಷ್ಟವಾದಂತೆ'—ಈ ನುಡಿಯನ್ನು ಪ್ರದರ್ಶಿಸುವಂತೆ ಇತ್ತು ಅತ್ತಿಮಬ್ಬೆಯ ದಾನಗುಣ.

ಪದೆದೆಱೆದರ್ಥಿಜನಕ್ಕೆ
ತ್ತುದೆ ಧನಮೀಯದುದೆ ಕೆಟ್ಟುದೆಂದರ್ಥಮನೀ
ವುದಱಿಂ ತನ್ನಷ್ಟಂ ಯ
ನ್ನದೀಯತೇ ಎನಿಪುದತ್ತಿಮಬ್ಬೆಯ ದಾನಂ

ಅಲ್ಲದೆ ಅವಳು ಕಲಿಯೂ ಆಗಿದ್ದಳು, ಕಸವರಗಲಿಯೂ ಆಗಿದ್ದಳು. ಎಂದರೆ ರಣಶೂರೆಯೂ, ದಾನಶೂರೆಯೂ ಆಗಿದ್ದಳು. ಮನೆಯಲ್ಲಿಯೂ ಮೊನೆಯಲ್ಲಿಯೂ ಎಂದರೆ ಯುದ್ಧದಲ್ಲಿ ಇವಳನ್ನು ಸರಿಗಟ್ಟುವ ಮೀಸೆಹೊತ್ತ ಅಣ್ಣಗಳು ಉಂಟೇ ಎಂದು ರನ್ನ ಕೇಳುತ್ತಾನೆ.

ಕಲಿಯೆನೆ ನೆಗಟ್ದಳ್ ಕಸವರ
ಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೆತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್

ಅವಳು, ಶೀಲಾಲಂಕೃತೆ, ಗುಣಮಾಲಾಲಂಕೃತೆ; ಈ ಮಹಾಸತಿಯ ಹೆಸರನ್ನು ತೆಗೆದುಕೊಂಡರೆ ಬಾಲೆಯರಿಗೆ ಖಳಕಲಂಕವು ಹತ್ತುವದಿಲ್ಲ. ಅತ್ತಿಮಬ್ಬೆಯ ಚರಿತವು ಪವಿತ್ರವಾದುದು.

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಟ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

ಅತ್ತಿಮಬ್ಬೆಯ ಗುಣವರ್ಣನೆಯಲ್ಲಿ ಆ ಕಾಲದ ಕಾವ್ಯಪದ್ಧತಿಗನುಸಾರವಾಗಿ ಅತಿಶಯೋಕ್ತಿಯಿದ್ದರೂ ರನ್ನನ ನಿರೂಪಣೆ ಅವಳ ವ್ಯಕ್ತಿತ್ವವನ್ನು ನಮಗೆ ಸ್ಫುಟವಾಗಿಸುತ್ತದೆ.

ಅಜಿತಪುರಾಣದಲ್ಲಿ ನಮ್ಮ ಮನವನ್ನು ಸೆಳೆಯುವ ಮಾನವಸಹಜ ಸ್ವಭಾವದ ಇನ್ನೊಂದು ವ್ಯಕ್ತಿಯೆಂದರೆ, ಸಗರ ಚಕ್ರವರ್ತಿ. ರನ್ನನು ಅವನಿಗೆ ವೈರಾಗ್ಯ ಹುಟ್ಟಿದ ಪ್ರಸಂಗವನ್ನು ಬಹಳ ಪರಿಣಾಮಕಾರಿಯಾಗಿ ನಿರೂಪಿಸಿದ್ದಾನೆ. ಅಲ್ಲಿ ಸಗರನ ಪಾತ್ರವು ತನ್ನ ವಿಶಿಷ್ಟ ವ್ಯಕ್ತಿತ್ವದಿಂದ ನಮ್ಮ ಮೇಲೆ ಗಾಢವಾದ ಪರಿಣಾಮವನ್ನು ಉಂಟುಮಾಡುತ್ತದೆ. ೬೦,೦೦೦ ಸಾವಿರ ಮಕ್ಕಳ ಮರಣದ ವಾರ್ತೆಯನ್ನು ಕೇಳಿದ ಸಗರನ ಮನಃಸ್ಥೈರ್ಯವು ನಮಗೆ ಅಚ್ಚರಿಯನ್ನುಂಟುಮಾಡುತ್ತದೆ.

ಅನಿತೊಂದು ಶೋಕವೇಗಂ
ತನಗಾಗೆಯುಮಚಲಿತಸ್ವರೂಪದಿನಿರ್ದಂ
ಕನಕನಗಂಬೊಲ್ ಸಗರನ
ಮನಮಂ ಸಾಗರದ ಗುಣ್ಪಸಜೀವರುಮೊಳರೇ

ಇಂಥ ಶೋಕವೇಗದಲ್ಲಿಯೂ ಮೇರುಪರ್ವತದಂತೆ ಸಗರನು ಅಚಲನಾಗಿದ್ದನಂತೆ. ಪರಿಜನರೂ, ಪುರಜನರೂ 'ಅರಸನೇಂ ಕಲ್ಲಿರ್ದಯೋ, ಪಾನಿಸನೋ, ಕಲ್ಲುಂ ಮರನಿರ್ಪಂತಿರ್ದಂ ಇನಿತು ನಿಷ್ಕರುಣನೊ ಪೇಳ್' ಎಂದು ಆಡಿಕೊಳ್ಳುತ್ತಿದ್ದರಂತೆ. ಆದರೆ ಅರಸನಿಗಾದ ದುಃಖವೇನು ಸಾಮಾನ್ಯವಲ್ಲ. "ಮಹಾಸತ್ವನುಂ ಧೈರ್ಯಾಂಬುರಾಶಿಯುಂ ಅಪ್ಪುದರಿಂದ ಅಸಹ್ಯಮಪ್ಪ ದುಃಖೋದ್ರೇಕಮಂ ಸೈರಿಸಿರ್ದಂ". ಇಂಥ ಧೈರ್ಯ-ಸ್ಥೈರ್ಯವನ್ನು ಗಂಭೀರವಾಗಿ ಪ್ರದರ್ಶಿಸಿದ ಸಗರನ ವ್ಯಕ್ತಿತ್ವವು ವಾಚಕರ ಹೃದಯದಲ್ಲಿ ನೆಲೆಯಾಗಿ ನಿಲ್ಲುವಂತೆ ರನ್ನನು ಚಿತ್ರಿಸಿದ್ದಾನೆ.

ಇನ್ನು ಪಾತ್ರನಿರೂಪಣೆಯ ದೃಷ್ಟಿಯಿಂದ ಹೆಚ್ಚು ಮಹತ್ವದ್ದೂ ವೈವಿಧ್ಯಪೂರ್ಣವೂ ಆದ ರನ್ನನ ಕೃತಿರತ್ನವಾದ ಗದಾಯುದ್ಧವನ್ನು ಅವಲೋಕಿಸೋಣ. ಗದಾಯುದ್ಧ ಕಾವ್ಯವು ಮಹಾಭಾರತವೆಂಬ ಮಹೋದಧಿಯಿಂದ ಆಯ್ದುಕೊಂಡು ಕುಶಲತೆಯಿಂದ ಕೆತ್ತಿದ ಒಂದು ಅನರ್ಘ್ಯವಾದ ರತ್ನ. ಮಹಾಭಾರತದಲ್ಲಿಯ ಪ್ರಮುಖ ವ್ಯಕ್ತಿಗಳೆಲ್ಲರೂ ಇಲ್ಲಿ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಕಾಣಿಸಿಕೊಳ್ಳುತ್ತಾರೆ. ಈ ಎಲ್ಲರನ್ನೂ ರನ್ನನು ಆತ್ಮಸಾಕ್ಷಾತ್ಕರಿಸಿಕೊಂಡು ಅವರವರ ಚಿತ್ರಗಳನ್ನು ಎದ್ದುಕಾಣಿಸುವಂತೆ ಬಣ್ಣತುಂಬಿ ಬಣ್ಣಿಸಿದ್ದಾನೆ. "ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತೊಳಕೊಂಡಿತ್ತು" ಎಂದು ಅವನೇ ಹೇಳುವಂತೆ ಇಲ್ಲಿ ಮಹಾಭಾರತದ ಕಥೆಯನ್ನು ಸಿಂಹಾವಲೋಕನ ಕ್ರಮದಿಂದ ರನ್ನನು ಹೇಳಿದ್ದಾನೆ. ಮಹಾಭಾರತದಲ್ಲಿ ಪ್ರಮುಖ ಪಾತ್ರಗಳಾದ ಪಂಚಪಾಂಡವರು, ಶ್ರೀಕೃಷ್ಣ, ದ್ರೌಪದಿ, ದುರ್ಯೋಧನ, ಭೀಷ್ಮ, ಧೃತರಾಷ್ಟ್ರ, ಗಾಂಧಾರಿ, ಬಲರಾಮ, ಅಶ್ವತ್ಥಾಮ, ಸಂಜಯ ಇವರೆಲ್ಲ ಗದಾಯುದ್ಧದ ಕಥೆಯಲ್ಲಿ ಜೀವಂತ ವ್ಯಕ್ತಿಗಳಾಗಿ ಬರುತ್ತಾರೆ. ಅಲ್ಲದೆ ಕಥೆ ಪ್ರಾರಂಭವಾಗುವದಕ್ಕೆ

ಮೊದಲೇ ಮೃತಿಹೊಂದಿದ ಕರ್ಣ, ದುಃಶಾಸನ, ಅಭಿಮನ್ಯು, ದ್ರೋಣ,—ಇವರ ವ್ಯಕ್ತಿತ್ವ ಚಿತ್ರಣಗಳೂ ಆನುಷಂಗಿಕವಾಗಿ ಬಂದಿವೆ.

ಗದಾಯುದ್ಧವು ಒಂದು ಕಾವ್ಯವಾಗಿದ್ದರೂ ಅದೊಂದು ನಾಟಕೀಯ ಗುಣಗಳಿಂದ ಕೂಡಿದ ಕಾವ್ಯವೆಂಬುದನ್ನು ನಾವು ಗಮನಿಸಬೇಕು. ಅದನ್ನು ನಾಟ್ಯಕಾವ್ಯವೆಂದು (Dramatic poem) ಕರೆಯಬಹುದು. ಅದರ ರಚನಾಕ್ರಮವು ನಾಟಕದ ರಚನಾಕ್ರಮವನ್ನು ಅನುಸರಿಸುತ್ತದೆ. ಉಳಿದ ಸಾಹಿತ್ಯರೂಪಗಳಿಗಿಂತಲೂ ನಾಟಕಗಳಲ್ಲಿ ಪಾತ್ರನಿರೂಪಣೆಗೆ ಹೆಚ್ಚಿನ ಮಹತ್ವ ವಿದೆ. ಪಾತ್ರನಿರೂಪಣೆ ಸರಿಯಾಗಿದ್ದರೆ ಮಾತ್ರ ನಾಟಕವು ಯಶಸ್ವಿಯಾಗು ತ್ತದೆ; ಇಲ್ಲದಿದ್ದರೆ ಬಿದ್ದುಹೋಗುತ್ತದೆ. ಇದೊಂದು ನಾಟಕವೇ ಎಂದು ಅನೇಕ ಜನ ಪಂಡಿತರು ಅಭಿಪ್ರಾಯ ಪಡುವಷ್ಟು ನಾಟಕಯೋಗ್ಯವಾದ ಗುಣಗಳು ಗದಾಯುದ್ಧದಲ್ಲಿ ತುಂಬಿವೆ ಎಂದಮೇಲೆ ಇಲ್ಲಿ ಅನೇಕ ಪಾತ್ರ ಗಳು ರಂಗಸ್ಥಲದ ಮೇಲೆ ಬರುವಂತೆ ನಮ್ಮ ಮನೋರಂಗಸ್ಥಲದ ಮೇಲೆ ಹಾಯ್ದು ತಮ್ಮ ತಮ್ಮ ಪ್ರಭಾವ ವೈಶಿಷ್ಟ್ಯಗಳನ್ನು ಪ್ರಕಟಗೊಳಿಸುತ್ತವೆ. ಮುಖ್ಯಕಥೆ ಪಾತ್ರಗಳ ಭಾಷಣ, ಕೃತಿಗಳಿಂದಲೇ ಮುಂದುವರೆಯುತ್ತದೆ. ಈ ಕಾವ್ಯದಲ್ಲಿ ಕವಿ ತಾನೇ ನೇರವಾಗಿ ಹೇಳುವ ಮಾತುಗಳು ಬಹಳ ಕಡಿಮೆ. ಕವಿಯ ನೇರವಾದ ಉಕ್ತಿಗಳು ರಂಗ ಸೂಚನೆಯಂತಿವೆ. ಎಂದಮೇಲೆ ನಾಟಕದಂತಿರುವ ಈ ಕಾವ್ಯದಲ್ಲಿ ಕವಿ ಪಾತ್ರನಿರೂಪಣೆಗೆ ಪ್ರಥಮ ಪ್ರಾಶಸ್ತ್ಯ ವನ್ನು ಕೊಟ್ಟು, ಅಲ್ಲಿ ಕಲಾಸಿದ್ಧಿಯನ್ನು ಸಾಧಿಸಬೇಕಾಯಿತು. ರನ್ನನು ಇಂಥ ಸಿದ್ಧಿಯನ್ನು ಪಡೆದ ರಸಸಿದ್ಧ.

ಗದಾಯುದ್ಧದ ಕಥಾಭಾಗವನ್ನು ಸಂಕ್ಷೇಪವಾಗಿಯಾದರೂ ಇಲ್ಲಿ ನಿರೂಪಿಸಲಿಕ್ಕೆ ನಾನು ತೊಡಗುವದಿಲ್ಲ. ಆ ಕಾರ್ಯವನ್ನು ಇನ್ನೊಬ್ಬ ವಿದ್ವಾಂಸರು ಮಾಡಿದ್ದಾರೆ. ಇಲ್ಲಿಯ ಪಾತ್ರಗಳನ್ನು ರನ್ನನು ಹೇಗೆ ಕಡೆದಿ-ದ್ದಾನೆ? ಅವರ ಮನೋಧರ್ಮವೆಂಥದು? ಅವೆಲ್ಲ ನೈಜವೆಂದು ನಮ್ಮ ಹೃದಯವನ್ನು ಮುಟ್ಟುವುವೆ? ಈ ಮೊದಲಾದ ವಿಷಯಗಳನ್ನು ಇಲ್ಲಿ ವಿವರಿಸಲಿಕ್ಕೆ ಯತ್ನಿಸುತ್ತೇನೆ. ಮೊದಲು ಈ ಕಾವ್ಯದ ಅಮುಖ್ಯವೆಂದೆನಿಸುವ ಪಾತ್ರಗಳ ಬಗೆಗೆ ವಿವೇಚಿಸಿ ಕೊನೆಗೆ ಈ ಮಹಾನಾಟಕದ ಹಿರಿಯ ಹುದ್ದರಿ ಗಳಾದ ಭೀಮ ಮತ್ತು ದುರ್ಯೋಧನರ ಪಾತ್ರ ರಚನಾ ಕೌಶಲವನ್ನು

ವಿವರಿಸುತ್ತೇನೆ. ಒಂದು ದೃಷ್ಟಿಯಿಂದ ಎಲ್ಲಾ ಪಾತ್ರಗಳೂ ಮುಖ್ಯವೇ. ಅಮುಖ್ಯವೆಂದು ಭಾವಿಸಲ್ಪಟ್ಟ ಪಾತ್ರಗಳ ನಿರೂಪಣೆಗೂ ಕವಿ ಸಂಪೂರ್ಣ ಗಮನವನ್ನು ಕೊಡಬೇಕಾಗುತ್ತದೆ.

ಈ ವಿಷಯವನ್ನು ವಿವೇಚಿಸುವದನ್ನು ಪ್ರಾರಂಭಿಸುವದಕ್ಕೆ ಮೊದಲು ಇನ್ನೊಂದು ಮಾತನ್ನು ನಾವು ಅವಶ್ಯವಾಗಿ ಗಮನಿಸಬೇಕು. ಇಲ್ಲಿಯ ಪಾತ್ರಗಳೆಲ್ಲವೂ ಮೂಲವಾಗಿ ರನ್ನನಿಂದ ನಿರ್ಮಿತವಾದವುಗಳಲ್ಲ. ಎಲ್ಲರೂ ನಮ್ಮ ರಾಷ್ಟ್ರದ ಹೆಮ್ಮೆಯ ಬೃಹದ್ಗ್ರಂಥವೂ, ಭಾರತೀಯ ಸಂಸ್ಕೃತಿಯ ವಿಶ್ವ-ಕೋಶವೂ ಆದ ಮಹಾಭಾರತದಲ್ಲಿ ಬರುವ ವ್ಯಕ್ತಿಗಳು. ಇವರೆಲ್ಲರ ಸ್ಥೂಲ-ಮಾನವಾದ ಪರಿಚಯವು ಪ್ರತಿಯೊಬ್ಬ ಭಾರತೀಯನಿಗೂ ಇದ್ದೇ ಇರುತ್ತದೆ. ಈ ವ್ಯಕ್ತಿಗಳ ಪ್ರಧಾನ ಗುಣ-ಮೋಹಗಳನ್ನು ಅರಿಯದವರಾರು? ದುರ್ಯೋ-ಧನ ಎಂಥವ? ಭೀಮ ಎಂಥವ? ದ್ರೌಪದಿ ಎಂಥವಳು? ಇವೆಲ್ಲ ನಮ್ಮ ದೇಶದ ಬಾಲಕರಿಗೂ ಕೂಡ ತಕ್ಕಮಟ್ಟಿಗೆ ಗೊತ್ತಿದ್ದ ವಿಷಯ. ರನ್ನಕವಿ ಈ ಎಲ್ಲಾ ವ್ಯಕ್ತಿಗಳನ್ನು ತನ್ನ ಕಲ್ಪನಾವಿಲಾಸದಿಂದ ಪ್ರತ್ಯಕ್ಷೀಕರಿಸಿಕೊಂಡು, ತನ್ನ ವಿಶಿಷ್ಟದೃಷ್ಟಿಯಿಂದ ಚಿತ್ರಿಸಿ ನಮ್ಮ ಹೃದಯದಲ್ಲಿ ಮೂಡುವಂತೆ ಮಾಡಿದ್ದಾನೆ. ಇದೇ ಅವನ ಮಹತಿ.

ಮೊದಲು ಅಮುಖ್ಯವೆಂದೆನಿಸಬಹುದಾದ ಪಾತ್ರಗಳನ್ನು ಪರಿಶೀಲಿಸೋಣ.

ದ್ರೌಪದಿ : ದ್ರೌಪದಿಯಷ್ಟು ಕಷ್ಟಪರಂಪರೆಯನ್ನು ಅನುಭವಿಸಿದ ಸ್ತ್ರೀಯರು ಸಾಹಿತ್ಯ ಪ್ರಪಂಚದಲ್ಲಿ ವಿರಳ. ಅನ್ಯಾಯಕ್ಕೆ ತಕ್ಕ ಪ್ರತೀಕಾರವಾಗಲೇ ಬೇಕು; ದುಷ್ಟರನ್ನು ದಂಡಿಸಲೇಬೇಕು ಎಂಬ ಸಾತ್ವಿಕ ಕ್ರೋಧದ ವೀರರಮಣಿ ದ್ರೌಪದಿ. ಧರ್ಮರಾಜನ ಧರ್ಮಶ್ರವಣದಿಂದ ಭೀಮನು ಸಂಧಿಗೆ ಎಲ್ಲಿ ಒಡಂಬಡುವನೋ ಎಂಬ ಹೆದರಿಕೆ ಅವಳಿಗೆ. ಹೀಗೇನಾದರೂ ಸಂಧಿಯಾದರೆ ಅಗ್ನಿಯಲ್ಲಿ ಹುಟ್ಟಿದ ನನಗೆ ಅಗ್ನಿಯೇ ಗತಿ; ಅಡವಿಯಲ್ಲಿ ಹುಟ್ಟಿದ ನೀವು ಪಾಂಡವರು ಅಡವೀಪಾಲು ಎಂದು ಭೀಮನಿಗೆ ಹೇಳುತ್ತಾಳೆ.

ಸಮವಾಯಮಹಿತರೊಳ್ ಸಂ
ಧಿಮಾಡಿ ಯಮಸೂನು ಪೋಟೆ ವನವಾಸವೆ ದಲ್ ।
ನಿಮಗೆ ಶರಣೆನಗಮಂದ
ಗ್ನಿ ಮುಖದೆ ಪುಟ್ಟಿದುದಱಿಂದೆ ಶರಣಗ್ನಿಮುಖಂ ॥

ಹೀಗೆ ಮೊದಲಿಸಿ ನುಡಿದ ದ್ರೌಪದಿ ಸ್ತ್ರೀಸಹಜವಾದ ಅಶಿಕ್ಷಿತಪಟುತ್ವ ದಿಂದ ತನ್ನ ಉದ್ದೇಶ ಸಾಧಿಸುವದಕ್ಕಾಗಿ ಭೀಮಸೇನನ ಬೀರವನ್ನು ಸ್ತುತಿಸಿ ಅವನನ್ನು ಹುರಿದುಂಬಿಸುತ್ತಾಳೆ. "ಯುದ್ಧದೊಳ್ ಕುಱಿದಱಿಯಾಗಿ ಬಿಟ್ಟಿರಿಬಲಂಗಳೆ ಪೇಟವೆ ನಿನ್ನ ಬೀರಮಂ."

ಹೀಗೆ ಒಂದೆರಡು ಕುಂಚದ ಗೆರೆಗಳಿಂದ ಕವಿ ಅವಳ ವ್ಯಕ್ತಿತ್ವವನ್ನು ಚೆನ್ನಾಗಿ ನಮಗೆ ಪ್ರದರ್ಶಿಸುತ್ತಾನೆ. ಕಾವ್ಯದ ಆರಂಭದಲ್ಲಿಯೇ ಅವಳ ಪ್ರವೇಶವಾಗುತ್ತದೆ. ಮಧ್ಯದಲ್ಲಿ ಅವಳ ದರ್ಶನವೇ ಇಲ್ಲ. ಕೊನೆಯಲ್ಲಿ ಮಾತ್ರ ಮತ್ತೆ ಕಾಣಿಸಿಕೊಳ್ಳುತ್ತಾಳೆ; ಅದು ದುರ್ಯೋಧನನು ತೊಡೆ ಮುರಿದು ಬಿದ್ದ ಪ್ರಸಂಗದಲ್ಲಿ. ಆಗ ಭೀಮನಿಂದ ಅವಳ ವೇಣೀಸಂಹಾರವಾಗುತ್ತದೆ. ಆದರೆ ಭೀಮನ ಮಾತುಗಳಲ್ಲಿ ದ್ರೌಪದಿಯ ಪ್ರಸ್ತಾಪವು ಮೇಲಿಂದ ಮೇಲೆ ಬಂದೇ ಬರುತ್ತದೆ. 'ಎನಿತುಂ ದ್ರೌಪದಿ ಮುಕ್ತ ಕೇಶಿ ನಮವಳ್........'.... ಮುಂತಾಗಿ.

**ಸಂಜಯ** : ಸಂಜಯನು ದುರ್ಯೋಧನನ ಸಂಗಾತಿಯಾಗಿ ರಣರಂಗ ದಲ್ಲಿ ಅವನೊಡನೆ ಸಂಚರಿಸುವ ಎರಡು-ಮೂರು ಸನ್ನಿವೇಶಗಳು ಅತ್ಯಂತ ಹೃದಯಸ್ಪರ್ಶಿಯಾಗಿವೆ. ದುರ್ಯೋಧನನ ಛಲ, ಅಭಿಮಾನ, ದೀರ್ಘದ್ವೇಷ, ರೌದ್ರ. ನಿರಾಶೆ, ದುರ್ಬುದ್ಧಿ, ಗಾಢವಾದ ಶೋಕ, ಪಶ್ಚಾತ್ತಾಪ– ಇವೇ ಮೊದ ಲಾದ ವಿವಿಧಭಾವಗಳಿಂದ ಹೊರಹೊಮ್ಮಿದ ಅವನ ಉದ್ಗಾರಗಳಿಗೆ ಸಂಜಯ ನೊಬ್ಬನೇ ಶ್ರೋತೃವಾಗಿದ್ದಾನೆ. ಹೀಗೆ ದುರ್ಯೋಧನನ ಪಾತ್ರನಿರೂಪಣೆಗೆ ಸಹಾಯಕನಾಗಿ ಈ ಪಾತ್ರಸೃಷ್ಟಿಯಾಗಿದ್ದರೂ ಸಂಜಯ ತನ್ನದೇ ಆದ ವೈಶಿಷ್ಟ್ಯದಿಂದ ನಮ್ಮ ಮನಸ್ಸನ್ನು ಸೆಳೆಯುತ್ತಾನೆ. ಕವಿಯೇ ಹೇಳುವಂತೆ ಅವನು 'ನಿಸರ್ಗಮೂರ್ಖನುಂ, ಸ್ವಭಾವದೃಢನುಂ, ಸ್ವಾಮಿಹಿತವನುಂ' ಆಗಿದ್ದನು. ಅವನ ಮಾತುಗಳೂ, ಕೃತಿಗಳೂ ಅವನ ಸ್ವಭಾವಕ್ಕೆ ಅನುಗುಣ ವಾಗಿಯೇ ಇವೆ. ದುರ್ಯೋಧನ ತನ್ನ ಸೋಲಿನ ಸಂತಾಪದ ಭರದಲ್ಲಿ ಭೀಷ್ಮ-ದ್ರೋಣರನ್ನೂ ಹಳಿಯಲಿಕ್ಕೆ ಹಿಂದುಮುಂದೆ ನೋಡುವುದಿಲ್ಲ. "ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ".......... "ಓಜಂಗಡ ! ಚಿಃ ಭಾರ- ದ್ವಾಜಂಗಡ !" ಮುಂತಾದವು. ಈ ಮನಃಸ್ಥಿತಿಯ ಸುಯೋಧನನಿಗೆ ಪಾಂಡವರ ಪರಾಕ್ರಮವನ್ನು ವರ್ಣಿಸಿ ಸಂಧಿಯೇ ಒಂದು ಉಳಿದ ಮಾರ್ಗ

ವೆಂದು ಉಪದೇಶಿಸುವ ಮೂರ್ಖತನದ ಸಾಹಸವನ್ನು ಮಾಡುತ್ತಾನೆ. 'ಪವನಾತ್ಮಜಂ ಮಹಾರಥಂ ............ ಸಂಧಿ ಮಾಟ್ಪುದುತ್ತಮ ಪಕ್ಷಂ' ಭೀಮನ ಸ್ತುತಿಯಿಂದ ದುರ್ಯೋಧನನ ಕೋಪವು ಮತ್ತಷ್ಟು ಕೆರಳುತ್ತದೆ. ಸಂಜಯನಿಗೆ 'ಪೆಜರಂ ಪೊಗಟ್ದಪೆಯೆಮ್ಮಂ ಕಿರಿಯರ್ ಮಾಡಿದಪೆ ............ ಪೆಜನೊರ್ವಂ ಸಿಂಧುಪುತ್ರನಾಗಲ್ ಬಗೆವೊ' ಎಂದು ಗರ್ಜಿಸುತ್ತಾನೆ. ಸಂಜಯನ ಮೊಂಡುತನದ ಸ್ವಭಾವವನ್ನು ರನ್ನನು ಪರಿಣಾಮಕಾರಿಯಾಗಿ ತೋರಿಸಿದ್ದಾನೆ. ಸುಯೋಧನನ ರೌದ್ರಾಟೋಪಕ್ಕೆ ಅಂಜದೆ ತನ್ನ ಮಾತನ್ನೇ ಮತ್ತೆ ಮತ್ತೆ ಒತ್ತಿ ಹೇಳುತ್ತಾನೆ. ಏಕೆಂದರೆ ಇವನು 'ಸ್ವಾಮಿಹಿತವ'ನಾಗಿ ದ್ದನು. ತನ್ನ ಒಡೆಯನ ಕಲ್ಯಾಣವನ್ನು ಬಯಸಿ ಮತ್ತೆ ಮತ್ತೆ ಉಪದೇಶ ಮಾಡುತ್ತಾನೆ. ವಯಸ್ಸಿನಲ್ಲಿ ಹಿರಿಯನಾದ ಸಂಜಯನಿಗೆ ದುರ್ಯೋಧನನ ವಿಷಯವಾಗಿ ನಿಜವಾದ ಪ್ರೇಮವಿರುತ್ತದೆ. ರನ್ನನು ಅದನ್ನು ಬಹಳ ಮಾರ್ಮಿಕವಾಗಿ ಪ್ರದರ್ಶಿಸಿದ್ದಾನೆ. ದುರ್ಯೋಧನನು ದೇಸಿಗನಂತೆ ಬರಿ-ಗಾಲಿನಲ್ಲಿ ಕುರುಕ್ಷೇತ್ರದಲ್ಲಿ ಸಂಚರಿಸುತ್ತಿರುವದನ್ನು ಕಂಡು ಸಂಜಯನು,

ವಿನುತ ವಿರೋಧಿ ಮಂಡಳಿಕಮೌಳಿ ವಿಘಟ್ಟಿತಪಾದಪೀಠ ಕಾಂ
ಚನ ಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಯುಗಾ
ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ?

'ಎಂದು ಗಳಗಳನೆ ಕಣ್ಣನೀರಂ ನೆರಪುವ' ಸಂಜಯನ ಚಿತ್ರ ನಮ್ಮ ಹೃದಯ ವನ್ನು ಕಲಕುತ್ತದೆ

ದುಃಶಾಸನ ಕರ್ಣ ಮೊದಲಾದವರ ಮೃತ ದೇಹಗಳನ್ನು ಕಂಡು ಶೋಕಾ-ಕ್ರಾಂತನಾದ ದುರ್ಯೋಧನನನ್ನು ಶೋಕದಿಂದ ಪರಾವೃತ್ತನನ್ನಾಗಿ ಮಾಡುವ ಉದ್ದೇಶದಿಂದ, ಮೊದಲು ಹೇಳಿದ ಸಂಧಿಯ ಮಾತನ್ನು ಮರೆಯಿಸಿ ಜಲ ವನ್ನು ಮರೆಯಲಿಕ್ಕೆ ಸಂಜಯ ಉಪದೇಶಿಸುತ್ತಾನೆ. ಇಲ್ಲಿ ರನ್ನನು ಮಾನವನ ಮನೋವ್ಯಾಪಾರಗಳನ್ನು ಎಷ್ಟು ಸೂಕ್ಷ್ಮವಾಗಿ ಅವಲೋಕಿಸಿ ನಿರೂಪಿಸಿ-ದ್ದಾನೆಂಬುದನ್ನು ಗಮನಿಸಬೇಕು. ಒಟ್ಟಿನಲ್ಲಿ ಸಂಜಯನ ಪಾತ್ರವನ್ನು ರನ್ನನು ಅತ್ಯಂತ ಕುಶಲತೆಯಿಂದ ಚಿತ್ರಿಸಿದ್ದಾನೆ. ರನ್ನನಿಗೆ ನಮಗೆ ಇದ್ದಂತೆ ಮುಖ್ಯ ಮತ್ತು ಅಮುಖ್ಯ ಪಾತ್ರಗಳೆಂದು ಭೇದವಿದ್ದಂತೆ ಕಾಣುವದಿಲ್ಲ. ಇಲ್ಲಿಯ

ಎಲ್ಲಾ ಪಾತ್ರಗಳನ್ನೂ ಯಥೋಚಿತವಾಗಿ ಎದ್ದು ಕಾಣುವಂತೆ, ವಾಚಕರ ಹೃದಯದಲ್ಲಿ ನೆಲೆನಿಲ್ಲುವಂತೆ ಚಿತ್ರಿಸಿದ್ದಾನೆ. ಇದೇ ರೀತಿಯಾಗಿ ಪರಿಣತ-ವಯಸ್ಕರೂ ಇರ್ಕಣ್ಗುರುಡರೂ, ದುರ್ವಾರಶೋಕಸಂತಪ್ತರೂ ಆದ ಗಾಂಧಾರಿ ಧೃತರಾಷ್ಟ್ರರು, ಪ್ರಶಾಂತನೂ ಗಂಭೀರಾಂತರಂಗನೂ, ಭಗವದ್ಭಕ್ತನೂ ಆದ ಭೀಷ್ಮ, ಕ್ಷಮಾಶೀಲನೂ ಧರ್ಮಮೂರ್ತಿಯೂ ಆದ ಧರ್ಮರಾಜ, 'ಶ್ವೇತಕೃಷ್ಣ ಕಾರಕನಾದ, ಅಖಿಲ ನಾಟಕ ಸೂತ್ರಧಾರನಾದ ಕೃಷ್ಣ, ಹಲಮುಸಲಪಾಣಿಯೂ, ಸುಯೋಧನಪಕ್ಷಪಾತಿಯೂ ಆದ ಬಲರಾಮ, ದುಡುಕಿನ ದುರಭಿಮಾನದ ಮೂರ್ತಿಯಾದ ಅಶ್ವತ್ಥಾಮ — ಇವೇ ಮೊದಲಾದ ಪಾತ್ರಗಳು ಪ್ರಸ್ಫುಟ-ವಾಗಿಯೂ ನೈಜವಾಗಿಯೂ ಚಿತ್ರಿತವಾಗಿವೆ. ಇವರಲ್ಲಿ ಒಬ್ಬೊಬ್ಬರ ವಿಷಯ ವಾಗಿಯೂ ಒಂದೊಂದು ಲೇಖನವನ್ನೇ ಬರೆಯಬಹುದು. ಆದರೆ ವಿಸ್ತಾರ ಭಯದಿಂದ ಇಲ್ಲಿಗೆ ಅಮುಖ್ಯವೆನಿಸುವ ಪಾತ್ರಗಳ ಪರಾಮರ್ಶೆಯನ್ನು ಬಿಟ್ಟು ಈ ಕಾವ್ಯದ ಹಿರಿಯ ಹುದ್ದರಿಗಳಾದ ಭೀಮಸೇನ ಮತ್ತು ದುರ್ಯೋಧನ — ಈ ಎರಡೂ ಪ್ರಚಂಡ ಪಾತ್ರಗಳ ಪರಾಮರ್ಶೆಯನ್ನು ಮಾಡಲಿಕ್ಕೆ ಯತ್ನಿಸು-ತ್ತೇನೆ.

ಗದಾಯುದ್ಧದ ಭೀಮಸೇನ ಮತ್ತು ದುರ್ಯೋಧನ ಈ ಎರಡು ಪಾತ್ರ ಗಳ ವಿಷಯವಾಗಿ ಪಂಡಿತರಲ್ಲಿಯೂ ವಿಮರ್ಶಕರಲ್ಲಿಯೂ ವಿಪುಲವಾದ ಚರ್ಚೆ ಭಿನ್ನಾಭಿಪ್ರಾಯಗಳು ತಲೆದೋರಿವೆ. ಗದಾಯುದ್ಧದ ನಾಯಕನಾರು ? ಭೀಮನೆ, ದುರ್ಯೋಧನನೆ ? ದುರ್ಯೋಧನನು ಉದಾತ್ತನೆ ? ಇದೊಂದು ದುರಂತನಾಟಕವೆ ? ಈ ಮೊದಲಾದ ಪ್ರಶ್ನೆಗಳು ಉದ್ಭೂತವಾಗಿವೆ. ದುರ್ಯೋಧನನೇ ನಾಯಕ, ಅವನು ಉದಾತ್ತಗುಣಪೂರ್ಣ ಎಂದು ಕೆಲವರು ಭಾವಿಸಿದ್ದಾರೆ. ನಮ್ಮ ಪುರಾಣಗಳಲ್ಲಿ ಖಲಶಿಖಾಮಣಿಗಳೆಂದು ಖ್ಯಾತರಾದ ವರನ್ನು ಉದಾತ್ತರೆಂದು ಹೇಳುವದೂ, ಅಲ್ಲಿ ದುರಂತತೆಯನ್ನು ಹುಡುಕು ವುದೂ ಕೆಲವು ಆಧುನಿಕರಾದ ಇಂಗ್ಲಿಷ ಸಾಹಿತ್ಯದ ಅಭ್ಯಾಸಿಗಳಲ್ಲಿ ಒಂದು ಪದ್ಧತಿಯಾಗಿಬಿಟ್ಟಿದೆ. ದುರ್ಯೋಧನ ಉದಾತ್ತ; ಭೀಮನೇ ಖಲ. ರಾವಣ ಉದಾತ್ತ ನಾಯಕ — ಹೀಗೆ ಮುಂತಾಗಿ ಸಾಧಿಸುವ ಯತ್ನಗಳು ನಡೆದಿವೆ. ಇಂಥ ಪಂಡಿತರು ರನ್ನನ ಮಾತಿನಲ್ಲಿ 'ಶ್ವೇತಕೃಷ್ಣಕಾರಕರೆಂದು' ಹೇಳಬಹುದು. ಕರಿದನ್ನು ಬಿಳಿದು, ಬಿಳಿದನ್ನು ಕರಿದು ಮಾಡಲಿಕ್ಕೆ ಯತ್ನಿಸುವ ಚತುರತೆಯನ್ನು ಇಲ್ಲಿ ಕಾಣಬಹುದು.

ರನ್ನನ ಅಭಿಪ್ರಾಯದಲ್ಲಿ ದುರ್ಯೋಧನನು ಉದಾತ್ತನೇನಲ್ಲ. ಕಾವ್ಯದ ನಾಯಕನಂತೂ ಅಲ್ಲವೇ ಅಲ್ಲ. ಭೀಮಸೇನನೇ ನಾಯಕ. 'ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ' ಎಂದು ಘಂಟಾಘೋಷವಾಗಿ ಹೇಳಿದ್ದಾನೆ. ಭೀಮಸೇನನು ದುರ್ಯೋಧನನಂಥ ಖಲನನ್ನು ಸದೆಬಡಿದು ಲೋಕವನ್ನು ನಿಷ್ಕಂಟಕವನ್ನಾಗಿ ಮಾಡಿದನೆಂಬುದೇ ರನ್ನನ ಆಶಯವಾಗಿತ್ತು. ಆದರೆ ದುರ್ಯೋಧನನು ನಮ್ಮ ಮನಸ್ಸನ್ನು ವಿಸ್ಮಯದಿಂದ ತುಂಬುವ ಒಂದು ಅದ್ಭುತ ವ್ಯಕ್ತಿ. ಅವನಲ್ಲಿ ಸುಗುಣಗಳೂ ಕೆಲವು ಇದ್ದುವು; ದುರ್ಗುಣಗಳೂ ಹೆಚ್ಚಾಗಿ ಇದ್ದುವು. ಆದರೆ ಇವೆಲ್ಲವೂ ಬೃಹತ್ಪ್ರಮಾಣದಲ್ಲಿ ಇದ್ದುದರಿಂದ ಅವನ ವ್ಯಕ್ತಿತ್ವವು ಆಕರ್ಷಕವಾಗುತ್ತದೆ. ಇದರ ಹೆಚ್ಚಾದ ವಿವರಣೆಯನ್ನು ಮುಂದೆ ದುರ್ಯೋಧನನ ಪಾತ್ರಪರಿಶೀಲನೆಯಲ್ಲಿ ಮಾಡುತ್ತೇನೆ.

ಭೀಮಸೇನ, ದುರ್ಯೋಧನ ಇವರಿಬ್ಬರೂ ಮಹಾಭಾರತದ ಪ್ರಧಾನ ವ್ಯಕ್ತಿಗಳು. ಮೂಲಮಹಾಭಾರತದಲ್ಲಿಯೇ ಅವರ ಪಾತ್ರ ಸೃಷ್ಟಿಯಾಗಿ ಅವರ ಸ್ವಭಾವದ ಪ್ರಮುಖ ವೈಶಿಷ್ಟ್ಯಗಳು ನಿರ್ದಿಷ್ಟವಾಗಿಬಿಟ್ಟಿವೆ. ಸಾವಿರಾರು ವರ್ಷಗಳಿಂದ ನಮ್ಮ ಜನತೆಯ ಮನದಲ್ಲಿ ಅವು ಬೇರೂರಿ ಬಿಟ್ಟಿವೆ. ಆದರೆ ಮಹಾಭಾರತದಲ್ಲಿ ಕೆಲವು ವಿಸಂಗತವೆನಿಸುವ ಅಂಶಗಳನ್ನು ಅಳಿಸಿ ಈ ಪಾತ್ರಗಳಿಗೆ ಹೆಚ್ಚು ಸಮಂಜಸತೆಯನ್ನು ತಮ್ಮ ತಮ್ಮ ದೃಷ್ಟಿಯಿಂದ ಉಂಟುಮಾಡುವ ಯತ್ನವನ್ನು ಮುಂದಿನ ಕವಿಗಳು ಕೆಲವು ಸಾರೆ ಮಾಡಿದ್ದಾರೆ. ಅಂಥವರಲ್ಲಿ ನಮ್ಮ ರನ್ನನೂ ಒಬ್ಬ. ಈ ಎರಡು ಪಾತ್ರಗಳಲ್ಲಿ ಭೀಮಸೇನನು ಬಹಳ ಸರಳ ವ್ಯಕ್ತಿತ್ವವುಳ್ಳವ; ದುರ್ಯೋಧನನ ಸ್ವಭಾವವು ಪರಸ್ಪರ ವಿರುದ್ಧಾಂಶಗಳನ್ನೊಳಕೊಂಡು ಹೆಚ್ಚು ಜಟಿಲವಾಗಿದೆ. ಇವರೀರ್ವರನ್ನು ರನ್ನನು ಯಾವ ದೃಷ್ಟಿಯಿಂದ ನೋಡಿದ್ದಾನೆ, ಅವರ ಪಾತ್ರಗಳನ್ನು ಹೇಗೆ ಚಿತ್ರಿಸಿದ್ದಾನೆ ಎಂಬುದನ್ನು ನೋಡೋಣ.

**ಭೀಮಸೇನ :** ಕಾವ್ಯ ಪ್ರಾರಂಭದಿಂದಲೇ ಭೀಮಸೇನನು ರೌದ್ರದ ಪ್ರಚಂಡ ಮೂರ್ತಿಯಾಗಿದ್ದಾನೆ. "ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ" ಆತನ ರೌದ್ರಕ್ಕೆ ಅನೇಕ ಕಾರಣಗಳಿವೆ. ದುರ್ಯೋಧನನಿಂದಾದ ಅಪಮಾನ, ತಿರಸ್ಕಾರ ಅನ್ಯಾಯಗಳಿಗೆ ತಕ್ಕ ಪ್ರತೀಕಾರವಾಗಿಲ್ಲೆಂಬುದು ಅವನ ಮನಸ್ಸನ್ನು ಚುಚ್ಚುತ್ತಿದೆ. 'ಸುಯೋಧನೋರುಮಕುಟೋ

ಧೃಷ್ಟ'ವಾಗಿ ತನ್ನ ಪ್ರತಿಜ್ಞೆಪೂರ್ತಿಯಾದಾಗ ಮಾತ್ರ ಆತನಿಗೆ ಸಮಾಧಾನ. ಭೀಮನ ರೌದ್ರವನ್ನು ದ್ರೌಪದಿ ಇನ್ನೂ ಹೆಚ್ಚು ಕೆರಳಿಸುತ್ತಾಳೆ. ಮುಂದೆ ದುರ್ಯೋಧನನು ಕಾಣದಾಗಲು ಎಲ್ಲ ಕಡೆಗೂ ಅವನನ್ನು ಭೀಮನೇ ಹುಡುಕುತ್ತಾನೆ. ಈ ಸನ್ನಿವೇಶದಲ್ಲಿ ಭೀಮಸೇನನ ಕೋಪಾಟೋಪದ ಅದ್ಭುತವಾದ ನಿರೂಪಣೆಯನ್ನು ರನ್ನನು ಮಾಡಿದ್ದಾನೆ. ಧರ್ಮರಾಜನಿಗೆ ನಮಸ್ಕಾರ ಮಾಡಿ 'ದ್ರೌಪದಿಯ ದುಃಖವನ್ನು ನೋಡಿ ನೋಡಿ ನಾನು ಹೇಗೆ ಸೈರಿಸಲಿ? ನೀನು ನಿಷ್ಕರುಣಿ. ಇವತ್ತೊಂದು ದಿನ ನೀನು ಹಿರಿಯನಲ್ಲ; ನಾನು ವಿಧೇಯನಲ್ಲ; ನನಗೆ ಹೋಗಲಿಕ್ಕೆ ಅವಕಾಶ ಕೊಡು. ಕುರುಸೂನುವನ್ನು ಇಕ್ಕಿ ಸಾಯಹೊಡೆಯುವೆನು' ಎಂದು ಹೇಳುತ್ತಾನೆ.

ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡುಕಂ
ಡೆನಿತುಂ ಸೈರಿಪೆನೆನ್ನನುಜರುಂ ಪಾಂಚಾಲಿಯಂ ನೋಡಿ ನೀಂ
ಮನದೊಳ್ ನೋವುದುಮಿಲ್ಲ ನಿಷ್ಕರುಣೆಯ್ಯೆ ನೀವಿಂತಿರಾನನ್ನೆಗಂ
ಮುನಿಸಂ ತೀರ್ಚೆ ನರೇಂದ್ರವೈರಿ ತರುವಂ ನಿರ್ಮೂಲನಂ ಮಾಡುವೆಂ ॥

ಆನುಂ ವಿಧೇಯನಲ್ಲಂ
ನೀನುಂ ಗುರುವಲ್ಲಮಿಂದಿನೊಂದೆವಸದೊಳು
ರ್ವೀನಾಥ ಪರಿಯಬಿಡ ಕುರು
ಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ ॥

ಭೀಮಸೇನನು ಈ ಮನಃಸ್ಥಿತಿಗೆ ಬರಬೇಕಾದರೆ ಅಸಂಖ್ಯ ಕಾರಣಗಳಿವೆ. ಹಿಂದೆ ದುರ್ಯೋಧನನಿಂದಾದ ಅನೇಕ ಅನ್ಯಾಯಗಳನ್ನು ನಾವು ಗಮನಿಸಬೇಕು. ದ್ರೌಪದಿಯ ವಿಷಯವಾಗಿ ಅವನಲ್ಲಿದ್ದ ಮರುಕವನ್ನು ನಾವು ನೆನೆಯಬೇಕು. ಎಲ್ಲ ಪಾಂಡವರಲ್ಲಿ ಅವನೇ ಮಿಡುಕುಳ್ಳವನು. ಇಂಥ ಉದ್ವೇಗದಲ್ಲಿಯೂ 'ಉರ್ವೀನಾಥ ಪರಿಯ ಬಿಡ' ಎಂದು ಅಣ್ಣನ ಅಪ್ಪಣೆಯನ್ನು ಕೇಳುತ್ತಾನೆ. ಇಲ್ಲಿ ರನ್ನನು ಭೀಮಸೇನನ ಸ್ವಭಾವವನ್ನು ಬಹಳ ಮಾರ್ಮಿಕವಾಗಿಯೂ ಸೂಕ್ಷ್ಮ ಪರಿಜ್ಞಾನದಿಂದಲೂ ಚಿತ್ರಿಸಿದ್ದಾನೆ.

ಮುಂದೆ ಭೀಮಸೇನನು ಕೌರವರ ಪಾಳೆಯಕ್ಕೆ ಹೋಗಿ ಗಾಂಧಾರಿಗೆ 'ದುಃಶಾಸನೋರಸ್ಥಳಕ್ಷತಜಾಸೃಗಲಸೇಕದಿಂ ತಣಿಪಿದೆಂ ಕೋಪಾಗ್ನಿಯಂ.

ಬಂದೆನುದ್ಧತನಂ ಕೋಪಾಕ್ರಾಂತಾಪರಾಧಶತನಂ ನುಂಗಲ್ಕೆಪಿಂಗಾಕ್ಷನಂ' ಎಂದು ಹೇಳುವ ನುಡಿಗಳು ಅವನ ಕಲ್ಲೆದೆತನವನ್ನೂ ಒರಟುತನವನ್ನೂ ತೋರಿಸುತ್ತ ವೆಂದು ಎನಿಸಬಹುದು. ಆದರೆ ದುರ್ಯೋಧನನ ಶತಾಪರಾಧಗಳನ್ನು ಮನ ದಂದರೆ ಇಂಥ ಒರಟುತನಕ್ಕೂ ಯೋಗ್ಯಸಮರ್ಥನೆಯನ್ನು ಕಾಣಬಹುದು. ಅಪರಾಧಿಗೆ ತಕ್ಕ ಶಿಕ್ಷೆಯಾಗಲೇಬೇಕು ಎಂಬುದು ಆ ಕಾಲದಲ್ಲಿ ಸಾರ್ವತ್ರಿಕ ವಾಗಿ ಒಪ್ಪಿತವಾದ ಒಂದು ತತ್ವ; ಈ ಕಾಲದಲ್ಲಿಯೂ ಒಪ್ಪಿತವಾದ ತತ್ವವೇ ! ಭೀಮನು ಈ ತತ್ವವನ್ನು ಕಾರ್ಯರೂಪಕ್ಕೆ ತರುವದಕ್ಕೆ ಯತ್ನಿಸುವಲ್ಲಿ ಧರ್ಮ ವನ್ನೇ ಅನುಸರಿಸುತ್ತಾನೆ. ಈ ವಿಚಾರವನ್ನು ಮನದಲ್ಲಿ ಗಟ್ಟಿಯಾಗಿಟ್ಟು-ಕೊಂಡರೆ ಭೀಮನ ರೌದ್ರಾವೇಶ, ಅವನ ಭಯಂಕರ ಗರ್ಜನೆ, ಅವನ ಒರಟು ತನ-ಇವೆಲ್ಲವುಗಳೂ ಸ್ವಾಭಾವಿಕವೆಂದೆನಿಸುತ್ತವೆ. ಭೀಮನ ಪಾತ್ರಕ್ಕೆ ಸಮುಚಿತ ವಾದ ರೀತಿಯಲ್ಲಿಯೇ ಆತನ ಉಕ್ತಿಗಳನ್ನು ರನ್ನನು ಯೋಜಿಸಿದ್ದಾನೆ.

ಭೀಮಸೇನನು ದುರ್ಯೋಧನನ ಊರುಭಂಗ ಮತ್ತು ಮಕುಟಭಂಗ-ಇವೆರಡನ್ನು ಮಾಡಿಯೇ ತೀರುವೆನೆಂದು ಬದ್ಧಪ್ರತಿಜ್ಞನಾಗಿದ್ದಾನೆ. ಇದನ್ನು ನೆನೆದರೆ ಭೀಮ ದುರ್ಯೋಧನರ ಗದಾಯುದ್ಧದಲ್ಲಿ ಭೀಮನು ದುರ್ಯೋ-ಧನನ ತೊಡೆಗಳನ್ನು ಹೊಡೆದು ಮುರಿದದ್ದು ಅಧರ್ಮವೆಂದು ಹೇಳಲಿಕ್ಕಾ-ಗುವದಿಲ್ಲ. ತೊಡೆಗಳಿಗೆ ಹೊಡೆಯಬಾರದೆಂದು ಧರ್ಮಯುದ್ಧದ ನಿಯಮವು ಮಹಾಭಾರತ ಕಾಲದಲ್ಲಿ ಇದ್ದಿರಬಹುದು. ಆದರೆ ರನ್ನನ ಗದಾಯುದ್ಧದಲ್ಲಿ-ಯಂತೂ ಇದೊಂದು ದೋಷವೆಂದು ಎಣಿಸಲಾಗಿಲ್ಲ. ರನ್ನನ ದೃಷ್ಟಿಯಲ್ಲಿ ಧರ್ಮಯುದ್ಧದಲ್ಲಿ ದುರ್ಯೋಧನನನ್ನು ಭೀಮ ವಧಿಸಿದ. '......... ಧರ್ಮ ಯುದ್ಧದೊಳಂತಾತನನಿಕ್ಕಿ ಕೊಂದನದಱಿಂ ಭೀಮಂ ಜಯೋದ್ದಾಮಂ' ಎಂದು ಅವನೇ ಹೇಳಿದ್ದಾನೆ. ಒಟ್ಟಿನಲ್ಲಿ ರನ್ನ ಚಿತ್ರಿಸಿದ ಭೀಮಸೇನನು ನಮ್ಮ ಸ್ಮೃತಿಪಟದಮೇಲೆ ಕೊನೆಯವರೆಗೂ ಅಚ್ಚಳಿಯದೇ ಉಳಿಯುವ ವ್ಯಕ್ತಿ ಆದರೆ ಮೂಲ ಮಹಾಭಾರತದಲ್ಲಿ ಚಿತ್ರಿತನಾದ ಭೀಮನಿಗೂ ರನ್ನನ ಭೀಮ-ನಿಗೂ ಸ್ವಭಾವದಲ್ಲಿ ವಿಶೇಷ ವ್ಯತ್ಯಾಸವಿಲ್ಲವೆಂಬುದನ್ನು ನಾವು ಗಮನಿಸಬೇಕು. ಅಲ್ಲಿಯ ಭೀಮನ ಮನೋಧರ್ಮವನ್ನೇ ಹೆಚ್ಚು ಬಣ್ಣತುಂಬಿ ಥಳಾಗಿ ಕಾಣಬಂತೆ ರನ್ನನು ಭೀಮನ ಪಾತ್ರವನ್ನು ನಿರೂಪಿಸಿದ್ದಾನೆ.

**ದುರ್ಯೋಧನ :** ಇನ್ನು ಕೊನೆಗೆ ಗದಾಯುದ್ಧದ ಬಹಳ ಮಹತ್ವದ ಪಾತ್ರವಾದ ದುರ್ಯೋಧನನನ್ನು ಕುರಿತು ಪರಾಮರ್ಶಿಸೋಣ. ದುರ್ಯೋಧನನ ಪಾತ್ರನಿರೂಪಣೆಯಲ್ಲಿ ರನ್ನನು ಪ್ರತಿಭೆಯ ಪರಾಕಾಷ್ಠತೆಯನ್ನು ತೋರಿಸಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ನಮ್ಮ ಸ್ಮೃತಿಯಲ್ಲಿ ಚಿರಂತನವಾಗಿ ನಿಲ್ಲತಕ್ಕ ಕೆಲವೇ ಪಾತ್ರಗಳಲ್ಲಿ ರನ್ನನ ದುರ್ಯೋಧನನೊಬ್ಬ. ಗದಾಯುದ್ಧ ಕಾವ್ಯಕ್ಕೆ ದುರ್ಯೋಧನನು ನಾಯಕನಲ್ಲದಿದ್ದರೂ ಕಾವ್ಯದ ಬಹುಭಾಗವು ಅವನ ಮಾತುಕೃತಿಗಳಿಗೆ ಮೀಸಲಾಗಿದೆ. ಅಲ್ಲದೆ ನಾಯಕನಾದ ಭೀಮಸೇನನಿಗಿಂತಲೂ ಪ್ರತಿನಾಯಕನಾದ ದುರ್ಯೋಧನನೇ ನಮ್ಮ ಲಕ್ಷ್ಯವನ್ನು ಹೆಚ್ಚಾಗಿ ಸೆಳೆಯುತ್ತಾನೆ. ಗದಾಯುದ್ಧದ ೨ನೆಯ ಆಶ್ವಾಸದಿಂದ ೬ನೆಯ ಆಶ್ವಾಸದ ಅರ್ಧದ ವರೆಗೆ ಕೇವಲ ದುರ್ಯೋಧನನ ವಿಷಯವೇ ! ಆಮೇಲೆ ೧೦ನೆಯ ಆಶ್ವಾಸದ ವರೆಗೆ ದುರ್ಯೋಧನ ಭೀಮರಿಬ್ಬರೂ ಸಮಾನವಾಗಿ ಪ್ರಧಾನ ಪಾತ್ರರಾಗಿದ್ದಾರೆ. ರನ್ನನು ಆರಿಸಿಕೊಂಡ ಕಥಾಭಾಗವೇ ದುರ್ಯೋಧನನಿಗೆ ಹೆಚ್ಚು ಪ್ರಾಶಸ್ತ್ಯ ಕೊಡುವಂಥದಾಗಿದೆ. ದುರ್ಯೋಧನನು ಮಾಡಿದ ಅನಾರ್ಯವಾದ ಕಾರ್ಯಗಳೆಲ್ಲ ಕಥಾ ಪ್ರಾರಂಭಕ್ಕಿಂತ ಮೊದಲೇ ನಡೆದು ಹೋಗಿದ್ದರಿಂದ ಅವನ ವಿಕಳಾವಸ್ಥೆಯಲ್ಲಿ ವಾಚಕರಲ್ಲಿ ಸಹಾನುಭೂತಿ ಹುಟ್ಟುವದಕ್ಕೆ ಸಹಾಯಕವಾಗುತ್ತದೆ. ತುಂಬಿದ ಸಭೆಯಲ್ಲಿ ದ್ರೌಪದಿಯ ವಸ್ತ್ರಗಳನ್ನು ಸೆಳೆದು ಮಾನಭಂಗ ಮಾಡಲಿಕ್ಕೆ ಯತ್ನಿಸುವ ಹೇಯವಾದ ವರ್ತನೆ ಮೊದಲಾದ ದುರ್ಯೋಧನನ ಅಸಂಖ್ಯ ಪಾಪಕರ್ಮಗಳು ಈ ಕಾವ್ಯದಲ್ಲಿಯೇ ವರ್ಣಿತವಾಗಿದ್ದರೆ – ರನ್ನನ ಅಸಾಧಾರಣ ಪ್ರತಿಭೆಯಿಂದ ವರ್ಣಿತವಾಗಿದ್ದರೆ – ದುರ್ಯೋಧನನಲ್ಲಿ ನಮಗೆ ಸಹಾನುಭೂತಿಯೂ ಕನಿಕರವೂ ಹುಟ್ಟುತ್ತಿರಲಿಲ್ಲ. ಭೀಮನು ಅವನ್ನು ನೆನೆದು ನೆನೆದು ಆರ್ಭಟಿಸುತ್ತಲೇ ಇರುತ್ತಾನೆ.

ಮುಳಿಸಿಂ ನಂಜಿಕ್ಕಿ ಕೊಂದಂದಿನ ಜತುಗೃಹದೊಳ್ ಸುಟ್ಟ ಕೌಟಿಲ್ಯ-
ದುರ್ವೀ
ತಳಮಂ ಜೂದಾಡಿ ಗೆಲ್ದಂದಿನ ನಿಜಕಬರೀನೀವಿ ಬಂಧಂಗಳಂ ದೋ
ರ್ವಳದಿಂದಂ ತಮ್ಮನಿಂದಂ ತೆಗೆಯಿಸಿನಡೆದಾ ನೀಚನಾ ದ್ರೋಹನಾ ಸಂ
ಚಳನಾ ಚಂಡಾಳನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ ॥

ದುರ್ಯೋಧನನ ಪಾತ್ರರಚನೆಯಲ್ಲಿ ರನ್ನನು ಕೆಲವು ಪೂರ್ವ ಸೂರಿಗಳಿಗೆ ಋಣಿಯಾಗಿದ್ದಾನೆ. ಮೂಲ ಮಹಾಭಾರತದ ವ್ಯಾಸರಂತೂ ಸರಿಯೆ; ಅಲ್ಲದೆ ಭಾಸ, ಭಟ್ಟನಾರಾಯಣ, ಪಂಪ- ಈ ಕವಿಗಳ ಪ್ರಭಾವವು ರನ್ನನಮೇಲೆ ವಿಶೇಷವಾಗಿ ಆಗಿದ್ದಿರಬೇಕು. ಇವರಲ್ಲಿ ಪಂಪನಂತೂ ರನ್ನನಿಗೆ ಪರಮೋಪಕಾರ ಮಾಡಿದ ಕವಿಗುರು. ಮೂಲ ಮಹಾಭಾರತದ ದುರ್ಯೋಧನನೇ ಜಟಿಲ ಸ್ವಭಾವದ ವ್ಯಕ್ತಿಯಾಗಿದ್ದಾನೆ. ಅವನಲ್ಲಿ ದುರ್ಗುಣಗಳೂ ಸುಗುಣಗಳೂ ಎಲ್ಲಾ ಭವ್ಯ ಪ್ರಮಾಣದವೇ ! ಆದರೆ ಅಲ್ಲಿ ದುರ್ಯೋಧನನ ಅನೇಕ ಉಕ್ತಿಗಳಲ್ಲಿ, ಕೃತಿಗಳಲ್ಲಿ ಒಮ್ಮೊಮ್ಮೆ ವಿಸಂಗತತೆ ಕಂಡುಬರುತ್ತದೆ. ಮುಂದಿನ ಕವಿಗಳು ಮಹಾಭಾರತದಿಂದ ಒಂದೊಂದು ಪ್ರಸಂಗವನ್ನು ಆಯ್ದುಕೊಂಡು ತಮ್ಮ ಕೃತಿಗಳನ್ನು ರಚಿಸುವಾಗ ಇಂಥ ವಿಸಂಗತತೆಯನ್ನು ಕಡಿಮೆಮಾಡಿ ಒಂದು ಹೆಚ್ಚು ಸುಸಂಬದ್ಧವಾದ ಪಾತ್ರವನ್ನು ನಿರ್ಮಿಸಲಿಕ್ಕೆ ಯತ್ನಿಸಿದರು. ಇಂಥವರಲ್ಲಿ ರನ್ನನಮೇಲೆ ಅತ್ಯಂತ ಗಾಢವಾದ ಪ್ರಭಾವವನ್ನು ಬೀರಿದ ಕವಿಯೆಂದರೆ ನಮ್ಮ ಆದಿಕವಿ ಪಂಪ.

ದುರ್ಯೋಧನನ ಸ್ವಭಾವವೈಶಿಷ್ಟ್ಯಗಳನ್ನು ವ್ಯಕ್ತಗೊಳಿಸುವ ಮೂಲ ಮಹಾಭಾರತದಿಂದ ಭಿನ್ನವಾದ ಸನ್ನಿವೇಶಗಳನ್ನು ರನ್ನನು ಪಂಪನಿಂದ ತೆಗೆದುಕೊಂಡಿದ್ದಾನೆ. ಆದರೆ ರನ್ನನು ಪಂಪನು ಸಂಕ್ಷೇಪವಾಗಿ ವಿವರಿಸಿದ್ದನ್ನು ವಿಸ್ತರಿಸಿ ಅದರಮೇಲೆ ತನ್ನ ಪ್ರತಿಭಾಪ್ರಭಾವವನ್ನು ಬೀರಿ ಹೊಸದೊಂದು ಮನೋವೇಧಕವಾದ ಪಾತ್ರವನ್ನು ನಿರ್ಮಿಸಿದ್ದಾನೆ. ವ್ಯಾಸರ ಮಹಾಭಾರತದಲ್ಲಿಯ ಗದಾಸೌಪ್ತಿಕ ಪರ್ವಗಳ ಕಥೆಯನ್ನೂ ಪಂಪಭಾರತ ಗದಾಯುದ್ಧಗಳಲ್ಲಿ ವರ್ಣಿತವಾದ ಅದೇ ಕಥೆಯನ್ನೂ ಹೋಲಿಸಿ ನೋಡಿದರೆ ಪಂಪ ರನ್ನರ ದುರ್ಯೋಧನನು ಮಾನವತೆಯಲ್ಲಿಯೂ ಉದಾತ್ತತೆಯಲ್ಲಿಯೂ ಮಿಗಿಲಾಗಿದ್ದಾನೆ. ದುರ್ಯೋಧನನ ವ್ಯಕ್ತಿತ್ವವು ಜಟಿಲವೂ ಪರಸ್ಪರ ವಿರುದ್ಧಾಂಶಗಳುಳ್ಳದ್ದಾಗಿಯೂ ಇದ್ದುದನ್ನು ಹೆಚ್ಚು ಸುಸಂಗತವಾಗಿಯೂ ಮನೋವೇಧಕವಾಗಿಯೂ ಈ ನಮ್ಮ ಇಬ್ಬರು ಕವಿಗಳು ಚಿತ್ರಿಸಿದ್ದಾರೆ.

ಗದಾಯುದ್ಧದಲ್ಲಿ ನಾಯಕನಾದ ಭೀಮಸೇನನಗಿಂತಲೂ ಪ್ರತಿನಾಯಕನಾದ ದುರ್ಯೋಧನನೇ ವಾಚಕರ ಮನಸ್ಸನ್ನು ಹೆಚ್ಚಾಗಿ ಹಿಡಿಯುತ್ತಾನೆ.

ಇದಕ್ಕೆ ಹಲವು ಕಾರಣಗಳಿವೆ. ಭೀಮನದು ಸರಳ ಸ್ವಭಾವ; ಅಲ್ಲಿ ಭಿನ್ನ ಭಿನ್ನ ಭಾವಗಳ ತಾಕಲಾಟಕ್ಕೆ ಆಸ್ಪದವಿಲ್ಲ. ದುರ್ಯೋಧನನಲ್ಲಿ ರಾಗದ್ವೇಷಾದಿಗಳು ಅಭಿಮಾನ, ಛಲ, ಬಂಧುಪ್ರೇಮ, ಮಿತ್ರಪ್ರೇಮ, ಅಹಂಭಾವ, ಲೋಭ, ಕಪಟತನ, ಆತ್ಮಶ್ಲಾಘಾಸಕ್ತಿ, ಶೌರ್ಯ, ಸಾಹಸ, ಮಾತ್ಸರ್ಯ, ಧೈರ್ಯ– ಹೀಗೆ ಅನೇಕ ಪ್ರಕಾರದ ಸುಗುಣ ದುರ್ಗುಣಗಳು ಒಂದೇ ವ್ಯಕ್ತಿಯಲ್ಲಿ ಬೃಹತ್ಪ್ರಮಾಣದಲ್ಲಿ ನೆಲೆನಿಂತಿವೆ. ಇಂಥ ವ್ಯಕ್ತಿಯ ಯಥಾಯೋಗ್ಯವಾದ ಸ್ವಭಾವ ಚಿತ್ರವನ್ನು ಕೊಡುವುದು ದುಸ್ತರವಾದ ಕಾರ್ಯ. ಇಂಥ ವ್ಯಕ್ತಿ ಸರಳ ಸ್ವಭಾವದ ವ್ಯಕ್ತಿಗಿಂತಲೂ ಹೆಚ್ಚು ಆಕರ್ಷಕನಾಗುತ್ತಾನೆ. ದುರ್ಯೋ-ಧನನಲ್ಲಿ ವಾಚಕರ ಸಹಾನುಭೂತಿ ಹುಟ್ಟಿ ಆವನ ಅವಸ್ಥೆಯಲ್ಲಿ ಆಸ್ಥೆ ತಳೆಯುವಂತಾಗುವದಕ್ಕೆ ಅವನ ಶೋಚನೀಯವಾದ ಸ್ಥಿತಿಯು ಕಾರಣವಾಗುತ್ತದೆ. ದೊಡ್ಡ ಸ್ಥಾನದಲ್ಲಿದ್ದ ಒಬ್ಬ ಮನುಷ್ಯ ಬಿದ್ದನೆಂದರೆ ಸ್ವಾಭಾವಿಕವಾಗಿ ಜನರ ಕನಿಕರಕ್ಕೆ ಪಾತ್ರನಾಗುತ್ತಾನೆ. ಗದಾಯುದ್ಧದಲ್ಲಿ ನಮ್ಮ ದೃಷ್ಟಿಗೆ ಬೀಳುವ ದುರ್ಯೋಧನ ಎಲ್ಲವನ್ನು ಕಳೆದುಕೊಂಡು ನಿರ್ವಾಜ್ಯ ಶೌರ್ಯವೊಂದೇ ಉಳಿದ ಏಕಾಕಿ ದುರ್ಯೋಧನ.

ರನ್ನನು ದುರ್ಯೋಧನನು ಕಾವ್ಯರಂಗವನ್ನು ಪ್ರವೇಶಿಸುವದಕ್ಕೆ ಮೊದಲು ಒಂದು ದೀರ್ಘವಾದ ಗದ್ಯಭಾಗವನ್ನು ಸೇರಿಸಿ, ಭೀಷ್ಮ, ದ್ರೋಣ, ಕರ್ಣ, ಜಯದ್ರಥ, ದುಃಶಾಸನ ಮೊದಲಾದ ಕೌರವನ ಕಡೆಯ ವೀರಾಧಿವೀರರು ಹತರಾದ ಸಂಗತಿಯನ್ನು ಅರುಹಿ 'ಸಮರಧೈರ್ಯನುಂ ಮಹಾಶೌರ್ಯನುಂ, ಛಲದಂಕಮಲ್ಲನುಂ, ಸಕಲಭೋಗಲಕ್ಷ್ಮೀಪತಿಯುಂ, ಅಭಿಮಾನಧನನುಂ,' ಎನಿಸಿದ ಸುಯೋಧನನಲ್ಲಿ ನಮ್ಮ ಸಹಾನುಭೂತಿ ಹುಟ್ಟುವಂತೆ ಮಾಡುತ್ತಾನೆ. ಕಾವ್ಯವನ್ನು ಓದುತ್ತಹೋದಂತೆ ದುರ್ಯೋಧನನ ಬಿಂಕದಮಾತು, ಆತನ ಛಲ, ಆತನ ಏಕಾಂಗವೀರ್ಯ, ಆತನ ಪುತ್ರಪ್ರೇಮ-ಎಲ್ಲಕ್ಕಿಂತಲೂ ಹೆಚ್ಚಾಗಿ ಆತನ ಮಿತ್ರಪ್ರೇಮ ಇವುಗಳಲ್ಲಿ ನಮ್ಮ ಆಶ್ಚರ್ಯವೂ, ಆದರವೂ ಹೆಚ್ಚುತ್ತಲೇ ಹೋಗುವವು.

ದುರ್ಯೋಧನ, ಸಂಜಯ ಈ ಇಬ್ಬರೇ ಆ ಕರಾಳವಾದ ರಣರಂಗದಲ್ಲಿ ಸಂಚರಿಸುವ ದೃಶ್ಯವೇ ಒಂದು ಬಗೆಯ ಭಯಾನಕವಾದ ವಾತಾವರಣವನ್ನು ನಿರ್ಮಿಸುತ್ತದೆ. ಈ ಹಿನ್ನೆಲೆಯಲ್ಲಿ ದುರ್ಯೋಧನನ ಕಟೂಕ್ತಿಗಳೂ ಸಂಜಯನ

ಹಿತೋಕ್ತಿಗಳೂ ನಮ್ಮ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವನ್ನುಂಟು-ಮಾಡುತ್ತವೆ. ಸಂಜಯನು ಪಾಂಡವರ ಶೌರ್ಯವನ್ನು ಹೊಗಳಹತ್ತಲು ದುರ್ಯೋಧನನಿಗೆ ಅಸಾಧ್ಯ ಕೋಪವುಂಟಾಗುತ್ತದೆ. ಆಗ ಅವನು ತನ್ನ ಹೀನ ಕೃತ್ಯವನ್ನು ಕೂಡ ಶ್ಲಾಘಿಸಿಕೊಂಡು ಪಾಂಡವರನ್ನು ಹೇಡಿಗಳೆಂದು ಹೀಯಾಳಿ-ಸುತ್ತಾನೆ.

'ಸಭೆಯೊಳ್ ತಮ್ಮಯ ಪಕ್ಕದೆನ್ನನುಜನಾ ಪಾಂಚಾಲಿಯಂ ಪಂಚವ-
ಲ್ಲಭೆಯಂ ಮೋದೆಯುಮಲ್ಲಿ ಮಿಳ್ಮಿಳನೆ ನೋಡುತ್ತಿರ್ದ ಬಲ್ಲಾಳ್ಗಳಿ-
ಲ್ಲಿ ಭರಂಗೆಯ್ದು ಪರೀ ಪರಾಕ್ರಮಮುಮೀ ಪೆರ್ಮಾತುಮೀ ಗಂಡುಮೀ
ಸುಭಟಾಲಾಪಮುಮೆಲ್ಲಮಾ ನೃಪಸುತರ್ಗಂದೆಲ್ಲಿ ಪೊಕ್ಕಿರ್ದುದೋ

ಇಲ್ಲಿ ದುರ್ಯೋಧನನ ಕೆರಳಿದ ಮನಃಸ್ಥಿತಿ, ಆತನ ಧಕ್ಕೆಗೊಂಡ ಅಭಿಮಾನ, ಆತನ ಪಾಂಡವ ದ್ವೇಷ ಇವೆಲ್ಲವನ್ನು ರನ್ನನು ಪ್ರಭಾವಿಯಾಗಿ ನಿರೂಪಿಸಿದ್ದಾನೆ. ಧೃತರಾಷ್ಟ್ರ ಗಾಂಧಾರಿಯರು ಅವನಿಗೆ ಸಂಧಿಮಾಡಿಕೊಳ್ಳೆಂದು ಹೇಳಲು ಸುಯೋಧನನು ತಾನು ಕಪಟತನದಿಂದ ಪಾಂಡವರಿಂದ ಕಸಿದುಕೊಂಡ ಭೂಮಿ-ಯನ್ನು ಮತ್ತೆ ಅವರಿಗೆ ತಿರುಗಿ ಕೊಡುವನೇ' ಎಂದು ತನ್ನ ಕೈತವವನ್ನು ಒಪ್ಪಿ ಕೊಳ್ಳುತ್ತಾನೆ.

ಧರೆಯಂ ಪಟ್ಟಾಳ್ದಿರ್ ಪಾಂ
ಡುರಾಜನುಂ ನೀಮುಮದನೆ ಕೈತವದಿಂದ
ಯ್ವರ ಕಯ್ಯೊಳೆಳೆದುಕೊಂಡುಂ
ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೆ

ಹೀಗೆ ದುರ್ಯೋಧನನ ಸ್ವಭಾವದ ಕುಟಿಲತೆಯನ್ನು ರನ್ನನು ಸ್ಪಷ್ಟಪಡಿಸಿದ್ದಾನೆ.

ಅಪಾರ ದುಃಖಕ್ಕೆ ಭಾಗಿಯಾಗಿದ್ದರೂ ದುರ್ಯೋಧನನು ಧೃತಿಗೆಡದೆ ಅಚಲನಾಗಿದ್ದಾನೆ. 'ವಜ್ರಮನಸಪ್ಪೆನ್ನಂ' ಎಂದು ಅವನೇ ಹೇಳುವಂತೆ ಅವನು ವಜ್ರಮನನಾಗಿದ್ದಾನೆ. ಆದರೆ ಇಂಥ ವಜ್ರಮನನಾದವನೂ ತನ್ನ ಬಂಧು-ಮಿತ್ರರ ಕಳೇಬರಗಳನ್ನು ನೋಡಿ ಆ ಹೊತ್ತಿಗಾದರೂ ಮೃದುಮಾನಸ-ನಾಗುತ್ತಾನೆ. ಇಲ್ಲಿ ರನ್ನನು ಮಾನವಸ್ವಭಾವದ ವೈಚಿತ್ರ್ಯವನ್ನು ಹೃದಯಂಗಮ-ವಾಗಿ ತೋರಿಸಿದ್ದಾನೆ. ಲಕ್ಷಣಕುಮಾರ, ದುಃಶಾಸನ – ವಿಶೇಷವಾಗಿ ಕರ್ಣ

ಇವರನ್ನು ಕುರಿತು ಶೋಕಿಸುವ ದುರ್ಯೋಧನ ನಮ್ಮ ಹೃದಯವನ್ನು ಸೂರೆಗೊಳ್ಳುತ್ತಾನೆ. ಆದರೆ ಈ ದುರ್ವಾರ ದುಃಖವು ಅವನನ್ನು ನಿರ್ವೀರ್ಯ-ನನ್ನಾಗಿ ಮಾಡುವದಿಲ್ಲ. 'ಶೋಕರಸಮಂ ಕ್ರೋಧರಸದ ಮೇಲಿಕ್ಕಿ' ಮುಂದಿನ ಸೇಡು ತೀರಿಸಿಕೊಳ್ಳುವ ಕಾರ್ಯಕ್ಕೆ ಉದ್ಯುಕ್ತನಾಗುತ್ತಾನೆ.

ತರಣಿತನಯನ ಗುಣೌಘ
ಸ್ಮರಣದೆ ಕಯ್ಗೆಣ್ಮುವೆನ್ ಶೋಕ ಮಹಾಸಾ-
ಗರಮಂ ತವೆಪೀರ್ದುದು ಭೀ
ಕರ ಮತ್ಕೋಪಾಗ್ನಿ ಬಾಡಬಾಗ್ನಿಯ ತೆಱದಿಂ

ಮುಂದೆ ಭೀಷ್ಮರನ್ನು ಕಂಡಾಗ ತನ್ನ ಪಾಪಕರ್ಮದ ಬಗೆಗೆ ಕ್ಷಣ ಮಾತ್ರ ಪಶ್ಚಾತ್ತಾಪಕ್ಕೆ ದುರ್ಯೋಧನನು ಒಳಗಾಗುತ್ತಾನೆ. 'ಎನ್ನ ಪಾಪಕರ್ಮನ ಕತದಿಂದಂ ಈ ನಿಮಗೆ ಈ ಇರವಾದುದೆ ಸಿಂಧುನಂದನಾ' ಎಂದು ಭೀಷ್ಮರಿಗೆ ಹೇಳುತ್ತಾನೆ. ಆದರೆ ಸಂಧಿಯನ್ನು ಮಾಡುವುದು ಲೇಸೆಂದು ಹೇಳಿದ ಅವರ ಮಾತನ್ನು ಲಕ್ಷಿಸದೆ ತನ್ನ ಛಲವನ್ನೇ ಸಾಧಿಸುತ್ತಾನೆ. 'ಅಭಿಮಾನಮದನೆ ಬಲ್ವಿಡಿವಿಡಿವೆಂ' 'ಪಾಂಡವರೊಳಿಱಿದು ಛಲಮನೆ ಮೆಱೆವೆಂ.' ಎಂದು ಮುಂತಾಗಿ ತನ್ನ ಹಟವನ್ನೇ ಸಾಧಿಸುತ್ತಾನೆ. ಮುಂದೆ ಭೀಷ್ಮರ ಉಪದೇಶದ ಮೇರೆಗೆ ಹೆದರಿಕೆಯಿಂದಲ್ಲ– ವೈಶಂಪಾಯನ ಸರೋವರದಲ್ಲಿ ಕಾಲವಂಚನೆ ಮಾಡುವದಕ್ಕೆ ಅಡಗಿ ಕುಳಿತುಕೊಳ್ಳುತ್ತಾನೆ.

ದುರ್ಯೋಧನನು ವೈಶಂಪಾಯನ ಸರೋವರವನ್ನು ಪ್ರವೇಶಿಸುವ ಸಂದರ್ಭದಲ್ಲಿ ಕವಿಯೇ ಹೇಳಿದ ಕೆಲವು ಮಾತುಗಳು ದುರ್ಯೋಧನನ ಸ್ವಭಾವದ ಬಗೆಗೆ ರನ್ನನ ಅಭಿಪ್ರಾಯವೇನಿತ್ತೆಂಬುದನ್ನು ಸ್ಪಷ್ಟಪಡಿಸುತ್ತವೆ.

ತುಱುಮಂ ಕಳಿಸುವ ಕೃಷ್ಣೆಯ
ನಿಱಿಯಂ ಪಿಡಿದುರ್ಚುವೆಟ್ಟು ಕೊಳನಂ ಪಿಂದುಂ
ಪೆಱಗಾಗಿ ಪುಗುವ ದುರ್ನಯ
ಮಱಿಪವೆ ಕೌರವನ ರಾಜ್ಯದಾಯುವ ಕೇಡಂ ॥

ಈ ಉಕ್ತಿಯಿಂದ ರನ್ನನು ದುರ್ಯೋಧನನನ್ನು ಉದಾತ್ತಸ್ವಭಾವದ ವೀರನೆಂದು ಬಗೆದಿರಲಿಲ್ಲವೆಂಬುದು ನಿಚ್ಚಳವಾಗುತ್ತದೆ. ಪಾಂಡವರು ದುರ್ಯೋಧನನು

ಅಡಗಿ ಕುಳಿತ ಸರೋವರದ ಸಮೀಪಕ್ಕೆ ಬಂದು ಪರಿಪರಿಯಾಗಿ ಅವನನ್ನು ಮೂದಲಿಸುತ್ತಾರೆ. ಭೀಮನ ಮೂದಲಿಕೆಗೆ ಅವನ ಸ್ಥೈರಣೆ ಮೀರಿ, ಕ್ರೋಧವು ಉಕ್ಕೇರುತ್ತದೆ. "ಕೋಪಾರುಣನೇತ್ರಂ ನೀರೊಳ ಗಿರ್ದುಂ ಬೆಮರ್ತನುರಗಪತಾಕಂ" 'ಸಾಹಸಗರ್ವಾಲಂಕೃತ'ನಾಗಿ ಕೊಳಗಿಂದ ಹೊರಗೆ ಬರುತ್ತಾನೆ. ಮುಂದೆ ಗದಾಯುದ್ಧವು ಭೀಮ-ದುರ್ಯೋಧನರ ನಡುವೆ ರಭಸದಿಂದ ನಡೆದಿದ್ದಾಗ ಭೀಮಸೇನನು ಮೂರ್ಛಾಗತನಾಗಲು ದುರ್ಯೋಧನನು ಅವನನ್ನು ಹೊಡೆಯದೆ ಅವನು ಎಚ್ಚರನಾಗುವವರೆಗೆ ಕಾದಿದ್ದು ಉದಾತ್ತತೆಯನ್ನು ತೋರಿಸುತ್ತಾನೆ. ಭೀಮಸೇನನು ನಿಯಮಕ್ಕೆ ವಿರುದ್ಧವಾಗಿ ತೊಡೆಗಳಿಗೆ ಹೊಡೆದು ದುರ್ಯೋಧನನ ಊರುಭಂಗಮಾಡಿ ತನ್ನ ಪ್ರತಿಜ್ಞೆಯನ್ನು ತೀರಿಸುತ್ತಾನೆ.

ಗದಾಯುದ್ಧದಲ್ಲಿ ಚಿತ್ರಿತವಾದ ದುರ್ಯೋಧನನ ಪಾತ್ರವು ರನ್ನನ ಪ್ರತಿಭೆಗೆ ಕಲಶಪ್ರಾಯವಾಗಿದೆ. ದುರ್ಯೋಧನ ಉದಾತ್ತನೇ ಇರಲಿ, ಉದಾತ್ತನಲ್ಲದಿರಲಿ ಇಲ್ಲವೆ ಸುಗುಣ ದುರ್ಗುಣಗಳ ಒಂದು ಮಿಶ್ರಣವೇ ಇರಲಿ ಅವನನ್ನು ನಾವು ಮರೆಯುವಂತಿಲ್ಲ. ಭೀಮನಗಿಂತಲೂ ಒಂದು ತೂಕ ಹೆಚ್ಚಾಗಿ ನಮ್ಮ ಹೃದಯವನ್ನು ಆಕರ್ಷಿಸುವ ಪಾತ್ರ ಅವನದು. ಅವನ ಮರಣವು ನಮ್ಮ ಮನಸ್ಸಿನಲ್ಲಿ ಏನೋ ಒಂದು ಅನಿರ್ವಚನೀಯವಾದ ಭಾವವನ್ನು ಹುಟ್ಟಿಸುತ್ತದೆ. ಮಾನವನ ಅಹಂಕಾರದ ದುರಂತಪರ್ಯವ-ಸಾನವನ್ನೇ ಅವನ ದಾರುಣ ಮರಣದಲ್ಲಿ ನಾವು ಕಂಡುಕೊಳ್ಳಬಹುದು. ಎಲ್ಲ ಮಾನವರಲ್ಲಿಯೂ ಅಲ್ಪಸ್ವಲ್ಪ ಪ್ರಮಾಣದಲ್ಲಿ ದುರ್ಯೋಧನನ ಅಂಶವಿದ್ದೇ ಇರುತ್ತದೆ. ಈ ಕಾರಣದಿಂದ ದುರ್ಯೋಧನನು ನಮ್ಮ ಸಹಾನುಭೂತಿಗೆ ಪಾತ್ರನಾಗುತ್ತಾನೆ. ಈ ಜಟಿಲವಾದ ಪಾತ್ರವನ್ನು ರನ್ನನು ಉಜ್ವಲ ವರ್ಣ-ಗಳಿಂದ ಚಿತ್ರಿಸಿ ಸುಮಾರು ಸಾವಿರ ವರ್ಷಗಳಾಗಿ ಹೋದರೂ ರಸಿಕರ ಹೃದಯದಲ್ಲಿ ಅದು ಎಲ್ಲ ಕಾಲದಲ್ಲಿಯೂ ನವೋನವವಾಗಿ ಪುನರ್ಮುದ್ರಿತ-ವಾಗುತ್ತಲೇ ಇರುತ್ತದೆ.

---

# ರನ್ನನ ಕಾವ್ಯದಲ್ಲಿ ನಾಟಕೀಯತೆ

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್"

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕಗಳ ಕೊರತೆ ಇದೆಯೆಂಬುದು ಸಾಹಿತ್ಯಚರಿತ್ರೆಯನ್ನು ಬಲ್ಲವರಿಗೆ ವೇದ್ಯವಾಗಿದೆ. ನಾಟಕಸಾಹಿತ್ಯ ಜನ-ಜೀವನದ ವಿವಿಧ ಮುಖಗಳನ್ನು ರಮ್ಯವಾಗಿ ಚಿತ್ರಿಸುವ ಪರಮಸಾಧನ. ಜಗತ್ತಿನ ಎಲ್ಲ ಸಾಹಿತ್ಯಗಳಲ್ಲಿಯೂ ನಾಟಕಸಾಹಿತ್ಯಕ್ಕೆ ಗಣ್ಯಸ್ಥಾನವಿದ್ದುದು ಗಮನಾರ್ಹ. ಪ್ರಾಚೀನತೆಯ ದೃಷ್ಟಿಯಿಂದ ಹಳಮೆಯನ್ನೂ ಹಿರಿಮೆಯನ್ನೂ ಪಡೆಯಬಲ್ಲ ಕನ್ನಡ ಸಾಹಿತ್ಯದಲ್ಲಿ ನಾಟಕಸಾಹಿತ್ಯದ ಅಭಾವವಿದ್ದುದು ಶೋಚನೀಯವಾದರೂ ಅಪ್ರಿಯ ಸತ್ಯವೆಂದೊಪ್ಪಬೇಕು. ಅದಕ್ಕೆ ಕಾರಣವೂ ಇಲ್ಲ-ದಿಲ್ಲ. ಕನ್ನಡ ಸಾಹಿತ್ಯದ ಆರಂಭಕಾಲದಲ್ಲಿ ಅದಕ್ಕೆ ಆದರ್ಶವಾಗಿ ನಿಂತುದು ಸಂಸ್ಕೃತ ಸಾಹಿತ್ಯ. ಆದಿ ಪಂಪಾದಿ ಕವಿಗಳಿಂದ ಕನ್ನಡ ಸಾಹಿತ್ಯದಲ್ಲಿ ಸುವರ್ಣ ಯುಗ ಆರಂಭವಾಗುವ ಹೊತ್ತಿಗೆ, ಎಂದರೆ ಹತ್ತನೆಯ ಶತಮಾನದ ಸಮ-ಯಕ್ಕೆ ಸಂಸ್ಕೃತದ ನಾಟಕಸಾಹಿತ್ಯದ ಸುವರ್ಣಕಾಲ ಮುಗಿದು ಹೋಗಿದ್ದಿತು. ಆಗ ಪಂಡಿತರ ಹಾಗೂ ರಸಿಕರ ಮನವನ್ನು ಸೆಳೆದುಕೊಂಡುದು ಮಹಾಕಾವ್ಯ. 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂಬ ನುಡಿ ಸುತ್ತೆಲ್ಲ ಪಸರಿಸಿ ಬಾಣನ ಅನುಕರಣ ಮಾಡಿ ಮಹಾಕಾವ್ಯಗಳನ್ನು ರಚಿಸುವ ಕಾರ್ಯದಲ್ಲಿ ೧೦ನೆಯ ಶತ-ಮಾನದ ಕನ್ನಡ ಕವಿಗಳು ನಿರತರಾದರು. ಆದುದರಿಂದ ನಾಟಕಸಾಹಿತ್ಯ ಪ್ರೌಢ ವಾಙ್ಮಯದಲ್ಲಿ ತಲೆಯೆತ್ತಲಿಲ್ಲ. ರಸಿಕರೂ ಚತುರರೂ ಆದ ಕನ್ನಡ ಜನಾಂಗ ಜಾನಪದ ನಾಟಕಸಾಹಿತ್ಯವನ್ನು ರಚಿಸಿಕೊಂಡು, ಅದನ್ನು ರಂಗಭೂಮಿಯ ಮೇಲೆ ಆಡಿ ನೋಡಿ ಆನಂದಪಡುತ್ತಿರಬೇಕು. ಏಕೆಂದರೆ, ಅಂದಿನ ಕನ್ನಡ ಸಾಹಿತ್ಯದಲ್ಲಿ ರಂಗಭೂಮಿ, ನಾಟಕ, ಪ್ರಕರಣ ಮುಂತಾದ ಶಬ್ದಗಳ ಪ್ರಯೋಗ ಅಲ್ಲಲ್ಲಿ ಕಂಡುಬರುವುದುಂಟು. ಜೊತೆಗೆ ಪಂಡಿತರ ಮನರಂಜನೆಗೆ ಸಂಸ್ಕೃತ

ನಾಟಕಸಾಹಿತ್ಯ ಸದಾ ಸನ್ನದ್ಧವಾಗಿದ್ದಿತು. ಆದುದರಿಂದ ಕನ್ನಡ ವಾಙ್ಮಯದಲ್ಲಿ ನಾಟಕಸಾಹಿತ್ಯ ಬೆಳೆದು ಬರುವುದಕ್ಕೆ ಆಸ್ಪದವಾಗಲಿಲ್ಲ. ಆದರೆ ಪ್ರಾಚೀನ ಕನ್ನಡ ಕವಿಗಳಲ್ಲಿ ನಾಟಕೀಯ ಪ್ರತಿಭೆ ವಿಪುಲವಾಗಿದ್ದಿತೆಂಬುದಕ್ಕೆ ಅನೇಕ ನಿದರ್ಶನಗಳನ್ನು ಕೊಡಬಹುದು. ಪಂಪನ 'ವಿಕ್ರಮಾರ್ಜುನವಿಜಯ', 'ಆದಿಪುರಾಣ'ಗಳಂತಹ ಮಹಾಕಾವ್ಯಗಳಲ್ಲಿ ನಾಟಕೀಯ ಸನ್ನಿವೇಶಗಳಿಗೆ ಕೊರತೆಯಿಲ್ಲ. ಹರೀಶ್ವರನ ಒಂದೊಂದು ರಗಳೆಯೂ ನಾಟಕೀಯ ಶೈಲಿಯಿಂದ ಮಿರುಗುವುದನ್ನು ಕಾಣಬಹುದು. ಹೀಗೆ ಒಬ್ಬೊಬ್ಬ ಕವಿಯನ್ನೂ ಸೂಕ್ಷ್ಮವಾಗಿ ಅವಲೋಕಿಸಿದರೆ, ಅವರಲ್ಲಿ ನಾಟಕೀಯ ಪ್ರತಿಭೆ ತುಂಬಿ ತುಳುಕುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಇಂತಹ ಕವಿಗಳಲ್ಲಿ ಅಗ್ರಗಣ್ಯರಾದವರು ರನ್ನ, ರಾಘವಾಂಕ. ಅವರು ಕನ್ನಡ ನಾಟ್ಯಪ್ರತಿಭಾದೇವಿಯ ಎರಡು ಕಣ್ಣುಗಳಿದ್ದಂತೆ. ಜನ್ಮತಃ ನಾಟಕಕಾರರಾಗಿ ಜನಿಸಿದ ಅವರು ಕಾಲಮಾನದ ಪ್ರಭಾವಕ್ಕೆ ಒಳಗಾಗಿ ಮಹಾಕಾವ್ಯಗಳನ್ನು ರಚಿಸಿರುವರೆಂಬುದು ಸಕೃದ್ದರ್ಶನಕ್ಕೆ ಹೊಳೆಯುತ್ತದೆ. ಆ ಮಹಾಕಾವ್ಯಗಳಲ್ಲಿ ನಾಟಕಗಳು ಅವಿತು ಕುಳಿತಿರುವುದನ್ನು ಆಧುನಿಕ ಪಂಡಿತರು ಅವಗಾಹನೆಗೆ ತೆಗೆದುಕೊಂಡು ಮಹಾಕಾವ್ಯದ ಪಂಜರದಿಂದ ಈಗಾಗಲೇ ಅವನ್ನು ಬೇರ್ಪಡಿಸಿಕೊಟ್ಟಿದ್ದಾರೆ. ಇಲ್ಲಿ'ಗದಾಯುದ್ಧನಾಟಕಂ', 'ಹರಿಶ್ಚಂದ್ರನಾಟಕಂ' ಮುಂತಾದುವನ್ನು ಉದಾಹರಿಸಬಹುದು. ಗದಾಯುದ್ಧನಾಟಕವು ಗಂಭೀರವಾದ ಹಳಗನ್ನಡ ಶೈಲಿಯಲ್ಲಿದ್ದರೂ ಹೊಸಗನ್ನಡ ರಂಗಭೂಮಿಯ ಮೇಲೆ ಅನೇಕ ಸಲ ಬಂದು ಪಂಡಿತ ಪಾಮರರ ಮೆಚ್ಚುಗೆಯನ್ನು ಪಡೆದಿದೆ. ಅದಕ್ಕೆ ಮಹಾಕವಿ ರನ್ನನ ನಾಟಕೀಯ ಪ್ರತಿಭೆಯೇ ಕಾರಣ. ಇಲ್ಲಿ, ರನ್ನನ ಕಾವ್ಯದಲ್ಲಿ ಕಂಡುಬರುವ ನಾಟಕೀಯತೆಯನ್ನು ಕುರಿತು ವಿಚಾರಿಸಲಾಗುವುದು.

ನಾಟಕಕ್ಕೆ ಮುಖ್ಯವಾದುವು ಮೂರು ಅಂಗಗಳು : ಅವನ್ನು ಕಾಲೈಕ್ಯ (unity of time), ಸ್ಥಳೈಕ್ಯ (unity of place), ಕ್ರಿಯೈಕ್ಯ (unity of action) ಎಂದು ಅರಿಸ್ಟಾಟಲ್ ಮೊದಲಾದ ಪಾಶ್ಚಾತ್ಯ ಕಾವ್ಯಮೀಮಾಂಸಕರು ನಿರ್ಧರಿಸಿರುವರು. ನಾಟಕಕಾರನು ಅವನ್ನು ಸಾಧಿಸಿದಷ್ಟೂ ನಾಟಕಕ್ಕೆ ಕಳೆಯೇರುತ್ತದೆ. ಪ್ರಾಚೀನ ಸಂಸ್ಕೃತ ನಾಟಕಗಳಲ್ಲಿ ಈ ತತ್ತ್ವವನ್ನು ಚಾಚೂ ತಪ್ಪದೆ ಅನುಸರಿಸಲಾಗದಿದ್ದರೂ ಅದರ ಕೆಲವು ಅಂಶವನ್ನಾದರೂ ಅಲ್ಲಿ

ಗಮನಿಸಿದಂತಿದೆ. ಹಾಗಿಲ್ಲದೆ ಹೋದರೆ ನಾಟಕದ ಪರಿಣಾಮ ಸರಿಯಾಗಿ ಆಗುವುದಿಲ್ಲ. ಪಾಶ್ಚಾತ್ಯ ನಾಟಕಗಳಲ್ಲಿಯಾದರೂ ಈ ತತ್ವಕ್ಕೆ ಪ್ರಧಾನ ಸ್ಥಾನ. ನಾಟಕಗಳನ್ನೇ ಬರೆಯಹೊರಟ ಶ್ರೇಷ್ಠ ದರ್ಜೆಯ ಕಾಳಿದಾಸಾದಿಗಳಂತಹ ನಾಟಕಕಾರರ ಪ್ರತಿಭೆಗೆ ಹೊಳೆಯದೆ ಹೋದ ಐಕ್ಯತತ್ವದ ಅಂಶ ಖಂಡಕಾವ್ಯವನ್ನು ಬರೆದ ರನ್ನನಂತಹ ಮಹಾಕವಿಗೆ ತೋರಿದುದು ಅತ್ಯಂತ ಶ್ಲಾಘನೀಯ. ಗದಾಯುದ್ಧವೆಂಬ ಹೆಸರಿನೊಳಗೆ ಹತ್ತು ಆಶ್ವಾಸಗಳಲ್ಲಿ ಬರೆದ ಈ ಖಂಡಕಾವ್ಯದ ವಸ್ತು ಕೇವಲ ಒಂದುವರೆ ದಿನಗಳ ಅವಧಿಯಲ್ಲಿ ನಡೆದ ಘಟನೆ. ಮೂಲ ಘಟನೆ ಘಟಿಸಿದುದು ಕುರುಕ್ಷೇತ್ರ ರಣರಂಗದಲ್ಲಿ. ಅಲ್ಲಿರುವ ಕ್ರಿಯೆಗಳೆಲ್ಲ ಗದಾಯುದ್ಧ, ಸುಯೋಧನನ ಊರುಭಂಗ ಮುಂತಾದ ಮೂಲೋದ್ದೇಶಗಳಿಗೆ ಪೋಷಕವಾಗಿವೆ. ಅಂತೆಯೆ ಆ ಕಾವ್ಯ ಮೊದಲಿನಿಂದಲೂ ಅತ್ಯಂತ ಪರಿಣಾಮಕಾರಿಯಾಗಿಯೇ ಮುಂದುವರಿಯುತ್ತದೆ. ಅದನ್ನು ಓದುತ್ತ ಕುಳಿತಂತೆಯೇ ಸಹೃದಯನ ಚಿತ್ತವೃತ್ತಿ ಇನ್ನೊಂದೆಡೆಗೆ ಹೊರಳದಂತೆ ಕವಿ ನೋಡಿಕೊಂಡಿದ್ದಾನೆ. 'ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮಿೂ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾವಲೋಕನಕ್ರಮ'ದಿಂದಲೂ 'ಸತ್ಯಾಶ್ರಯದೇವನೆ ಪೃಥ್ವೀವಲ್ಲಭಂ ನಾಯಕನಾಗನಿಲಜನೊಳ್' ಹೋಲಿಕೆಯನ್ನು ಪಡೆಯಬೇಕೆಂಬ ಸಂಕಲ್ಪದಿಂದಲೂ ಕವಿ ಕೃತಿವಿರಚನೆ ಮಾಡಿದ್ದರೂ ನಾಟ್ಯಪ್ರತಿಭೆಯ ಆವೇಶದಲ್ಲಿ ಅವೆಲ್ಲ ಗೌಣವಾಗಿ ಪರಿಣಮಿಸಿವೆ. ಇಡೀ ಕಾವ್ಯದುದ್ದಕ್ಕೂ ಕಂಡುಬರುವುದು ರನ್ನನ ಅಸಾಧಾರಣ ಸನ್ನಿವೇಶ ಸಂಯೋಜನೆ. ಆ ಸನ್ನಿವೇಶಗಳನ್ನು ಹೀಗೆ ರೇಖಿಸಬಹುದು:

### ೧. ಭೀಮಸೇನನ ಪ್ರತಿಜ್ಞೆ :

ಮಹಾಭಾರತದ ನಿಜವಾದ ಕರ್ತೃ ದ್ರೌಪದಿ. ಆಕೆಗಾದ ಅಪಮಾನ, ಅದರ ಸೇಡು ತೀರಿಸಿಕೊಳ್ಳಬೇಕೆಂಬ ಛಲ, ಇವೇ ಗದಾಯುದ್ಧದ ಘಟನೆಗೆ ಪ್ರೇರಕಗಳಾಗಿವೆ. ಸಿಂಧುನಂದನ ಧೃತರಾಷ್ಟ್ರರಿರ್ದೊರೆಯೆ ಧರ್ಮರಾಜನು ಸಂಧಿಗೆ ಒಡಂಬಡುವನೆಂಬ ಅನುಶಯ ಆಕೆಗೆ ಇದೆ. ಇದನ್ನು ಕಳೆಯಬೇಕೆಂದು ಅವಳು ಕೌರವಾಂತಕನಲ್ಲಿ ಬಿನ್ನೈಸುವಳು.

"ಗಳಿಯಿಸುತಿರೆ ಕಬರಿಭರಂ
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ
ನಳಿನಾನನೆ ನೀನಿರೆ ಕುರು
ಕುಳಾಂತಕಂ ಗಳಿತಕೋಪನೇ ?........"

ಎಂದು ಕಲಿ ಭೀಮನು ಆಕೆಯ ಪ್ರಶ್ನೆಗೆ ಮತ್ತೊಂದು ಪ್ರಶ್ನೆಯನ್ನೇ ಕೇಳುವನು.

'ಅನಲಾನಿಲಸಂಯೋಗಮುರಿಪದಿರ್ಪುದೆ ಪಗೆಯಂ ?' ಎಂದು ದ್ರೌಪದಿಗೆ ಉಂಟಾದ ಸಂದೇಹದ ನಿರಸನ ಮಾಡುವನು.

"ಊರುಗಳನುಡಿವೆನೊದೆವೆಂ
ಕೌರವಪರಿವೃಢನ ಮಕುಟಮಂ ವೇಣೀಸಂ
ಹಾರವ ಮಾಡುವೆಂ"

ಎಂಬ ತನ್ನ ಪ್ರತಿಜ್ಞೆಯನ್ನು ಪುನರುಚ್ಚರಿಸಿ ದ್ರೌಪದಿಯನ್ನು ಅಲ್ಲಿಂದ ಕಳಿಸಿ ಕೊಡುವನು.

ಇದೊಂದು ಸಣ್ಣ ಸನ್ನಿವೇಶ. ಇಲ್ಲಿ ಎರಡು ಮಹಾವ್ಯಕ್ತಿಗಳ ಮನಸ್ಸಿನ ಆಂದೋಲನವನ್ನು ಕವಿ ನಾಲ್ಕು ಮಾತಿನ ಸಂಭಾಷಣೆಯಲ್ಲಿ ಮುಗಿಸಿಬಿಟ್ಟಿರುವನು. ದ್ರೌಪದಿಯ ಮನಸ್ಸಿನ ಕಾತರ, ಭೀಮನ ಕೋಪಾಟೋಪ ಇವನ್ನು ಪೂರ್ತಿಯಾಗಿ ಗ್ರಹಿಸಿಕೊಂಡಿರುವ ಕವಿ ಅವೆರಡು ಪಾತ್ರಗಳನ್ನು ಸಜೀವವಾಗಿ ನಮ್ಮ ಮುಂದಿರಿಸುವನು. ಆತನ ನಾಟ್ಯಪ್ರತಿಭೆಯ ಜಾಣ್ಮೆ ಈ ಸನ್ನಿವೇಶದಲ್ಲಿ ಒಡೆದು ಕಾಣುತ್ತದೆ. ಡಾವರಡಾಕಿನಿಯಂತೆ ದೇವಾಸುರ ಯುದ್ಧಕ್ಕೆ ಕರಗಂಬೊತ್ತವೊಲಿರ್ದ ದ್ರೌಪದಿ, ಕೌರವನ ಊರುಗಳನುಡಿವೆನೊದೆವೆನೆಂದು ಭೀಷಣ ಪ್ರತಿಜ್ಞೆ ಮಾಡಿದ ಭೀಮಸೇನ ಇವರಿರ್ವರ ಗಂಭೀರ ಸನ್ನಿವೇಶದಲ್ಲಿ ಬುದ್ಧಿಮತಿ, ಕಂಚುಕಿ, ವಿದೂಷಕ ಇವರ ಪಾತ್ರಗಳನ್ನು ತಂದು, ಅಳುತ್ತ ಬಂದ ದ್ರೌಪದಿಯನ್ನು ನಗುತ್ತ ಹೋಗುವಂತೆ ಮಾಡಿ ನಾಟಕಕ್ಕೊಂದು ರಸಮಯವಾದ ನಾಂದಿಯನ್ನು ಹಾಕಿದ್ದಾನೆ ರನ್ನ.

೨. ರಣರಂಗದಲ್ಲಿ ಸಂಜಯ-ಸುಯೋಧನರು :

ಪ್ರತಿಕೂಲದೈವನಾದ ಸುಯೋಧನನನ್ನು ಇದ್ದಕ್ಕಿದ್ದಂತೆ ಬಿಟ್ಟರೆ ಮಹಾಭಾರತದ ಕಥೆ ಅರೆಗಳಿಗೆಯಲ್ಲಿ ಮುಕ್ತಾಯವಾಗುವುದೆಂಬ ಭರವಸೆ ಸಂಜಯ-

ನಿಗಿದೆ. ಅಂತೆಯೇ ಆತನನ್ನು ತಂದೆ-ತಾಯಿಗಳಿದ್ದಲ್ಲಿಗೆ ಕರೆದೊಯ್ದು ಸಂಧಾನದ ಪ್ರಯತ್ನ ಮಾಡಿಸಬೇಕೆಂಬುದು ಆತನ ಹಂಬಲ. ಸಂಜಯ-ಸುಯೋಧನರಿಬ್ಬರೂ ಈಗ ರಣರಂಗಪ್ರವೇಶ ಮಾಡುತ್ತಾರೆ. ಯುದ್ಧದಲ್ಲಿ ತನಗುಂಟಾದ ಅಪಜಯಕ್ಕೆ ದ್ರೋಣಾಶ್ವತ್ಥಾಮರು ಕಾರಣರೆಂದು ಬಗೆದ ಸುಯೋಧನನು ಅವರ ವಿಷಯವಾಗಿ ತನ್ನ ಕೋಪವನ್ನೇ ಕಾರುವನು. ಪಾಂಡವರು ಕೇತುಕೃತಾಂಜನತನಯರ್, ಸೂತೀಕೃತಹರಿವರಪ್ರಸಾದರ್–ಇಂತಹ ಅರ್ಜುನನಂ ಬಿಲ್ಗೊಳೆ, ಭೀಮನು ಗದೆಗೊಳೆ ಅವರ ಮುಂದೆ ನಿಲ್ಲುವವರೇ ಇಲ್ಲವೆಂದು ಸಂಜಯನು ಪಾಂಡವರನ್ನು ಹೊಗಳುವನು. 'ಪೆಱರಂ ಪೊಗೞ್ದಪೆ, ಎಮ್ಮಂ ಕಿಱಿಯಂ ಮಾಡಿದಪೆ ನೀನುಂ ಮಱಿಯ ಪಾಂಡವಂ."

"ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ-
ಗನೆ ? ಭಗದತ್ತನಾನೆ ಬಱಿಯೆಲ್ವುಡಿವನ್ನೆಗಮೊತ್ತೆ ಗಂಡನಾ-
ಗನೆ ? ಕೊಲಲೊಲ್ಲದಂಗಪತಿ ಬಿಲ್ಗೊಳೆ ಕೋದೆಟ್ಟೆವಲ್ಲಿ ಗಂಡನಾ-
ಗನೆ ? ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ ?"

ಎಂದು ಪಾಂಡವರನ್ನು ವಿಧವಿಧವಾಗಿ ಹೀಗಳೆಯುವನು. ಇಷ್ಟಕ್ಕೆ ನಿಲ್ಲದೆ,

"ಪಸೆಯೊಳ್ ಪಸುರ್ವಂದರೊಳ-
ಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯಿರೆ ದೋಷಾ-
ವಸಥರ್ ಪಾದರರಿಂ ಜನಿ-
ಯಿಸಿದರ್ ಪಾಂಡವರ್........"

ಎಂದು ನಿಜ ವಂಶದಲ್ಲಿ ಜನಿಸಿದ ಪಾಂಡವರ ಮೇಲೆ, ಅದರಲ್ಲಿಯೂ ಮಾತೆಯಾದ ಕುಂತಿಯ ಮೇಲೆ ಹಾದರದ ಆರೋಪವನ್ನು ಹೊರಿಸುವಲ್ಲಿ ತನ್ನ ಆಸುರೀ ಸಂಸ್ಕಾರವನ್ನು ವ್ಯಕ್ತಪಡಿಸುವನು. ಇದು ದ್ವಿತೀಯ ಸನ್ನಿವೇಶದ ಪರಮಘಟ್ಟ. ಇಲ್ಲಿಂದ ಬೇರೊಂದು ಮುಖ ಆರಂಭವಾಗಲೇಬೇಕು. ಈ ಸಮಯದಲ್ಲಿಯೆ ರನ್ನನು ಧೃತರಾಷ್ಟ್ರ - ಗಾಂಧಾರಿಯರನ್ನು ಅಲ್ಲಿ ಪ್ರವೇಶಮಾಡಿಸುವನು.

## ೩. ಧೃತರಾಷ್ಟ್ರ–ಗಾಂಧಾರಿಯರ ಸಂದರ್ಶನ:

ತಂದೆ ತಾಯಿಗಳು ಬಂದ ವೃತ್ತಾಂತವನ್ನು ಸಂಜಯನು ಸುಯೋಧನನಿಗೆ ತಿಳಿಸಲು ಒಮ್ಮೆಲೆ ಸುಯೋಧನನ ಮನಸ್ಸಿನಲ್ಲಿ ಪರಿವರ್ತನೆಯಾಗುವುದು.

ಕಂದ ನಿಜಾನುಜರೆಲ್ಲಿದ-
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ–
ನೆಂದು ಮಱುಮಾತುಗುಡುವೆಂ
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೊ !

ಎಂಬ ಮಾತಿನಲ್ಲಿ ಸುಯೋಧನನ ಹೃದಯಪರಿವರ್ತನೆಯ ದಾರುಣ ಚಿತ್ರವನ್ನು ಕವಿ ನಮ್ಮ ಮುಂದಿರಿಸುವನು. 'ಕೊಂದರ್ ಕೌಂತೇಯರ್' ಎಂಬ ಮಾತು ಸುಯೋಧನನ ಬಾಯಲ್ಲಿ ಎಷ್ಟು ಔಚಿತ್ಯಪೂರ್ಣವಾಗಿ ಬಂದಿದೆ ಎಂಬುದು ಸಹೃದಯರ ನಿದರ್ಶನಕ್ಕೆ ಬಂದಿರಲು ಸಾಕು. ತಂದೆ-ತಾಯಿಗಳು ತನ್ನಲ್ಲಿಗೆ ಬರುತ್ತಿರುವರೆಂಬ ವಾರ್ತೆ ಸುಯೋಧನನ ಮನಸ್ಸಿನ ಮೇಲೆ ತಾತ್ಕಾಲಿಕ ಪರಿಣಾಮವನ್ನುಂಟುಮಾಡಿರುವುದೇನೋ ನಿಜ. ಆದರೆ ಪ್ರತ್ಯಕ್ಷ ದರ್ಶನದಲ್ಲಿ ಅವರು ಮರುಗಿ ಸೆರಗೊಡ್ಡಿ ಬೇಡಿಕೊಂಡ ಪ್ರಾರ್ಥನೆಗೆ ಯಾವ ಫಲವೂ ದೊರೆಯದಾಯಿತು. ಪಾಂಡವರೊಡನೆ ಸಂಧಾನವನ್ನು ಮಾಡಿಕೊಳ್ಳಬೇಕೆಂಬ ಸೂಚನೆ ಧೃತರಾಷ್ಟ್ರ ಗಾಂಧಾರಿಯರ ಬಾಯಿಂದ ಬರುವುದೊಂದೇ ತಡ, ಸುಯೋಧನನು ಕೊಡನ ಫಣೆಯಂತೆ ಕೆರಳುವನು. ಅವರ ಪ್ರಯತ್ನ ಸಫಲವಾಗದೆ ಕೊನೆಗೆ ಭೀಷ್ಮರ ಹಿತೋಪದೇಶವನ್ನು ಲಾಲಿಸಬೇಕೆಂಬ ನುಡಿಗೆ ಒಪ್ಪಿಕೊಳ್ಳುವನು.

## ೪. ಮರುಳ್ಗಳ ಸನ್ನಿವೇಶ :

ಸುಯೋಧನನಿಗೆ ಈಗ ಮೊದಲಿದ್ದ ಮನಃಸ್ಥೈರ್ಯವಿಲ್ಲ. ಛಲವೇನೋ ಗಟ್ಟಿಗೊಂಡಿದೆ. ಏಕಾಂಗಿಯಾದ ಆತನಿಗೆ ಪ್ರಪಂಚವೇ ಪ್ರತಿಕೂಲವಾಗಿ ನಿಂತಿದೆ. ತಂದೆ ತಾಯಿಗಳನ್ನು ಕಂಡು ಭೀಷ್ಮರನ್ನು ಕಾಣುವ ಉದ್ದೇಶದಿಂದ ಸಂಜಯ ದ್ವಿತೀಯನಾಗಿ ಬರುತ್ತಿರುವ ಸುಯೋಧನನನ್ನು ಕಂಡು ಯಾರಿಗೂ ಕನಿಕರವುಂಟಾಗುವಂತಿದೆ. ಮೊದಮೊದಲು ಆತನನ್ನು ವಿರೋಧಿಸಿದ ಸಂಜಯನಿಗೆ ಈಗ ಆತನ ಅಸಹಾಯಕ ಸ್ಥಿತಿಯನ್ನು ಕಂಡು ಹೃದಯ ಕರಗಿದೆ.

"ವಿನುತ ವಿರೋಧಿಮಂಡಳಿಕಮೌಳಿವಿಘಟ್ಟಿತ ಪಾದಪೀಠಕಾಂ-
ಚನ ಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ-
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಯುಗಾ-
ವನಿತಳದೊಳ್ ವಿಧಾತೃವಶದಿಂ ನಿಮಗಂ ನಡೆವಂತುಟಾದುದೇ ?"

ಎಂದು ಸಮರಭೂಮಿಯಲ್ಲಿ ಮುರಿದ ಬಿಲ್ಲು, ಬಾಣ, ಬತ್ತಳಿಕೆ, ಖಡ್ಗ ಮೊದಲಾದುವನ್ನು ತುಳಿಯುತ್ತ ನಡೆದ ದುರ್ಯೋಧನನನ್ನು ಕಂಡು ಸಂಜಯನು ಕಣ್ಣೀರಿಡುವನು. ಆದರೂ ಸುಯೋಧನನಲ್ಲಿ ಒಂದು ನಿಷ್ಠೆಯಿದೆ :

"ತನುಜಾನುಜರ ವಿಯೋಗದ
ಮನಃಕ್ಷತಂ ನೋಯಿಸಲ್ಕೆ ನೆಱಿಯವು ಸಮರಾ-
ವನಿಯೊಳುಡಿದಿರ್ದ ಕೈದುಗ-
ಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ ?"

ಆತನ ವಜ್ರಮನಸ್ಸು ಸಂಜಯನಿಗೆ ಸಮಾಧಾನ ಹೇಳುತ್ತದೆ. ಇರ್ವರೂ ಒಬ್ಬರನ್ನೊಬ್ಬರು ಸಂತೈಸುತ್ತ ಮುಂದೆ ಹೋಗುವಷ್ಟರಲ್ಲಿ ಮರುಳ್ಗಳ ಅದ್ಭುತವಾದ ದೃಶ್ಯವೊಂದನ್ನು ನಿರ್ಮಿಸಿ ರನ್ನನು ತನ್ನ ನಾಟಕೀಯತೆಯ ಕಲೆಗೆ ಕಲಶವನ್ನಿಡುವೆನು. ಅದೊಂದು ಭಯಾನಕ ದೃಶ್ಯ. ರಣಭೂಮಿಯಲ್ಲಿ ಮರುಳುಗಳ ಭೂತಾಟಿಕೆ ನಡೆದಿದೆ. ಸುಯೋಧನನು ಬರುವಷ್ಟರಲ್ಲಿ ಒಂದು ಮುಂದೆ ಬಂದು,

"ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ ನಿಜಾ-
ವರಜನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದನೆಯ್ದೆ ಭೀ-
ಷ್ಮರ ಬಿಸುನೆತ್ತರಂ ಕುಡಿವೊಡಿನ್ನುಮೊಳಂ ಕುರುರಾಜ ನಿನ್ನ ನೆ-
ತ್ತರ ಸವಿ ನೋಟ್ಪಿನಂ ಬಯಸಿ ಬೀತಪೆನೆಂದುದದೊಂದು ಪುಲ್ಮರುಳ್"

ಗೂಳಿ ಬಿದ್ದರೆ ಆಳಿಗೊಂದು ಕಲ್ಲೆಂದು ನಾಣ್ಣುಡಿಯುಂಟು.

ಕೌರವ ಚಕ್ರವರ್ತಿಯ ಸನಿಹದಲ್ಲಿ ಸುಳಿಯಲು ಗಾಳಿಯೂ ಅಂಜುವ ಕಾಲವೊಂದಿತ್ತು. ಚಕ್ರವರ್ತಿಗೆ ಈಗ ಇಳಿಗಾಲ ಬಂದಿದೆ. ಇಂತಹ ಸಮಯದಲ್ಲಿ ಒಂದು ಮರುಳ್ ಮುಂದೆ ಬಂದು ನಿನ್ನ ನೆತ್ತರ ಸವಿಯನ್ನು ಬಯಸಿ ಬೀಗಿರುವೆನೆಂದು ಹೇಳುತ್ತದೆ. ಇಷ್ಟೇ ಅಲ್ಲ; ಹಿಂದೆ ಅಳಿದವರ ಉಳಿದವರ ಸ್ಮರಣೆಯನ್ನೂ ಮಾಡಿಕೊಡುತ್ತದೆ. ವಿಧಿವಿಲಸನ ಪೌರುಷವನ್ನು ಹೇಗೆ ಹಣ್ಣು-ನೀರು ಮಾಡಬಲ್ಲುದೆಂಬುದರ ಚಿತ್ರವನ್ನು ಕವಿ ಈ ನಾಟಕೀಯ ಸನ್ನಿವೇಶದಲ್ಲಿ ಮಾರ್ಮಿಕವಾಗಿ ಪ್ರಕಟಿಸಿದ್ದಾನೆ. ಮರುಳ ಮಾತಿಗೆ ಬೆಲೆಗೊಡದೆ ಮುಂದೆ ನಡೆದಾಗ, ಸುಯೋಧನನ ಕಾಲು ಮಿದುಳಿನ ಕೆಸರಿನಲ್ಲಿ

ಜಾರಲು ಸಂಜಯನು ಆತನನ್ನು ಹಿಡಿದು 'ಊರುಭಂಗಮಾಗದೆ ವಲಂ' —ತೊಡೆ ಪೆಟ್ಟಾಗಲಿಲ್ಲವೇ ? ಎಂದು ಪ್ರಶ್ನಿಸುವನು. 'ಆಗದಾಗದು' ಎಂದು ಸುಯೋಧನನು ನುಡಿಯಲು, "ಭೀಮಕೋಪದೆ ನಿಸಗೂರುಭಂಗಮಾಗದೆ ಪೋಕುಮೆ ಕೌರವೇಶ್ವರಾ ?" ಎಂದು ಮರುಳ್ ಮರಳಿ ಪ್ರಶ್ನಿಸುವುದು. ಮರುಳ್ಮಾತಿನೊಳ್ ಪುರುಳೇನೆಂದು ದೊರೆ ಮುಂದೆ ಮುಂದೆ ಸಾಗಲು, ಮರುಳೆನ್ನುತ್ತದೆ :

ಅರಗಿನ ಮಾಡದೊಳ್ ವಿಷದ ಲಡ್ಡುಗೆಯೊಳ್ ಕೊಲಲೆಂದು ಬಂಧುಮ-
ತ್ಸರದೊಳೆ ವೈರಮಂ ಪದೆದು ಭೀಮನನಿನ್ನಿನಿತರ್ಕೆ ತಂದ ನೀಂ
ಮರುಳನೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ
ಮರುಳನೊ ನೋಟ್ಪವಿರ್ವರ ಮರುಳ್ತನಮಂ ಫಣಿರಾಜಕೇತನಾ".

ರನ್ನನ ಕಾವ್ಯಕಲೆ ನಾಟ್ಯಕಲೆಗಳ ಪರಚರಮಸೀಮೆ ಈ ದೃಶ್ಯ. ಸುಯೋಧನನ ಮನದ ತಾಳ್ಮೆ, ಮರುಳ್ಗಳ ಕಾಲುಕೆದರಿ ಜಗಳ ತೆಗೆವ ಲೀಲೆ ಇವನ್ನು ಕವಿ ಬಹಳ ಸೂಕ್ಷ್ಮವಾಗಿ ನಿರೀಕ್ಷಿಸಿದ್ದಾನೆ. ಮರುಳ್ಗಳು ತಮ್ಮನ್ನು ಮರುಳ್ಗಳೆಂದು ಸುಯೋಧನನಿಂದ ಕರೆಯಿಸಿಕೊಳ್ಳಲೂ ಸಿದ್ಧವಿಲ್ಲ. ಹಿಂದೆ ಪಾಂಡವರೊಡನೆ ಬದ್ಧದ್ವೇಷವನ್ನು ಕಟ್ಟಿಕೊಂಡ ಮರುಳ್ತನವನ್ನು ಆತನಿಗೆ ಎತ್ತಿ ತೋರಿಸುವವು. ನಾಟ್ಯರಂಗದಲ್ಲಿ ಮರುಳ್ಗಳಂತೆ ಕಂಡರೂ ಲೋಕ ರಂಗದಲ್ಲಿ 'ತನಗೆ ಲೋಕಂ ಮರುಳ್ ಲೋಕಕ್ಕೆ ತಾಂ ಮರುಳ್', ಎಂಬಂತೆ ಅವು ಲೋಕಾನುಭವದ ಸಾಂಕೇತಿಕ ವ್ಯಕ್ತಿಗಳು. ಅವನ್ನು ಮರುಳ್ಗಳ ಸನ್ನಿ-ವೇಶವನ್ನು ಪರಿಪೂರ್ಣವಾಗುವಂತೆ ನೆಯ್ದಿದ್ದಾನೆ. ಅಸದೃಶವಾದ ತಾಳ್ಮೆಯನ್ನು ಪ್ರಕಟಪಡಿಸಿದ ಸುಯೋಧನನು ನುಡಿಯದೆ ಮುಂದೆ ಹೋಗಲು,

ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ
ವಿಾಱಿಪೋ-
ದೊಡೆ ಕಲಿ ಭೀಮನಾಣೆಯೆನೆ ಧೂರ್ಜಟಿಯಾಣೆಗೆ ನಿಂದು
ಭೀಮನೆಂ-
ದೊಡೆ ಮುಳಿದಟ್ಟಿ ಕುಟ್ಟಲರಸಂ ಗದೆಗೊಂಡೊಡೆ ಭೂತಕೋಟಿಯುಂ
ಬಡಿಗೊಳೆ ಸಂಜಯಂ ನಯದೆ ಬಗ್ಗಿಸಿದಂ ಫಣಿರಾಜಕೇತುವಂ"

ನುಡಿಯದೆ ಹೋದರೆ ಮರುಳ್ಗಳು ಶಿವನಾಣೆಯನ್ನಿಡುವವು. ಶಿವನು ಮರುಳ್ಗಳಿಗೆ ಎಂತೋ ಅಂತೆಯೆ ಸುಯೋಧನನಿಗೂ ಅಧಿದೇವತೆ. ಅಧಿದೇವತೆಯ ಆಣೆಯನ್ನಿಟ್ಟರೂ ತಾಳಿಕೊಂಡು, ಮುಂದೆ ನಡೆಯುವನು. ಮೀರಿ ಹೋದರೆ ಕಲಿ ಭೀಮನಾಣೆಯೆಂದಾಗ ಸುಯೋಧನನ ಕೋಪಕ್ಕೆ ಎಲ್ಲೆಯಿಲ್ಲದಾಗುತ್ತದೆ. ಶಿವನಾಣೆಯೆಂದರೆ ಸುಮ್ಮನಿದ್ದ ಅವನು ಭೀಮನಾಣೆಯೆಂದೊಡನೆ ಗದೆಗೊಂಡು ಮರುಳ್ಗಳನ್ನು ಹೊಡೆಯಲು ಉದ್ಯುಕ್ತನಾಗುತ್ತಾನೆ. ಮರುಳ್ಗಳು ಬಡಿಗೆಯನ್ನು ತೆಗೆದುಕೊಂಡು ಕಾದಾಟಕ್ಕೆ ಅಣಿಯಾಗುವವು. ಸಂಜಯನು ನಯದಿಂದ ಸುಯೋಧನನನ್ನು ಬಿಡಿಸಿ ಮುಂದೆ ಕರೆದೊಯ್ಯುವನು.

ಈ ಸನ್ನಿವೇಶ ರಂಗಭೂಮಿಯ ಮೇಲೆ ಅತ್ಯಂತ ಪರಿಣಾಮಕಾರಿಯಾಗಬಲ್ಲುದೆಂಬುದನ್ನು ಪ್ರತ್ಯಕ್ಷ ಪ್ರಯೋಗದಿಂದ ಅರಿತುಕೊಂಡುದಾಗಿದೆ. ನೆಲನಾಣ್ಮ ಚಕ್ರವರ್ತಿಯೊಂದು ಕಡೆಗೆ ! ಪಡೆಯೆಡೆಯ ಕಡೆಯ ಬಡವನಿಗಿಂತಲೂ ಕಡೆಯಾದ ಮರುಳೊಂದು ಕಡೆಗೆ ! ಒಂದೆಡೆ ಗದೆ, ಇನ್ನೊಂದೆಡೆ ಬಡಿಗೆ ! ವಿಧಿಯ ವಿಕಟಾಟ್ಟಹಾಸವನ್ನು ಇದಕ್ಕಿಂತ ಸ್ಫುಟವಾಗಿ ಚಿತ್ರಿಸುವುದು ಸಾಧ್ಯವಿಲ್ಲವೆನಿಸುತ್ತದೆ.

## ೫. ಗುರು ಕೆಳೆಯ ಬಂಧು ಸಂದರ್ಶನ :

ಗದಾಯುದ್ಧವೊಂದು ಮಾನಸಿಕ ಹೋರಾಟ. ಮಾನವನ ಮನಸ್ಸಿನ ವಿವಿಧ ತರಂಗಗಳನ್ನು ಮಹಾಕವಿ ರನ್ನನು ಈ ಕಾವ್ಯದಲ್ಲಿ ಬಹುಸೂಕ್ಷ್ಮವಾಗಿ ವಿಶ್ಲೇಷಣ ಮಾಡಿದ್ದಾನೆ. ಕೋಪ ಆಟೋಪಗಳ ಉಗ್ರ ವ್ಯಗ್ರ ಸ್ವರೂಪದ ಸುಯೋಧನನು ಕಾವ್ಯಾರಂಭದಲ್ಲಿ ನಮ್ಮೆದುರು ತಂದಿರಿಸಿರುವನು. ಮಾನವನು ಸನ್ನಿವೇಶಗಳ ಪಡಿದೊತ್ತು. ಅವು ಆತನನ್ನು ಅರಗಿಸಿ, ಕರಗಿಸಿ, ಕೊರಗಿಸಿ ಹಣ್ಣುನೀರು ಮಾಡಿಬಿಡುತ್ತವೆ. ನಾಲ್ಕು ತಾಸುಗಳ ಅವಧಿಯಲ್ಲಿ ಹತ್ತೆಂಟು ಪರಸ್ಪರ ವಿಪರೀತವಾದ ಸನ್ನಿವೇಶಗಳು ಸಂಪ್ರಾಪ್ತವಾಗುತ್ತವೆ. ಅವುಗಳ ಫಲವಾಗಿ ಈಗ ಆತನು ವಿನಮ್ರನಾಗಿದ್ದಾನೆ. ತನ್ನ ಸೋಲಿಗೆಲ್ಲ ಅನ್ಯರೇ ಕಾರಣರೆಂದು ಸಾರಿದ ಆತನು ಈಗ ತನ್ನ ತಪ್ಪನ್ನೂ ವಿಧಿವಿಲಸನ ಲೀಲೆಯನ್ನೂ ಒಪ್ಪಿಕೊಳ್ಳುವಷ್ಟು ಅರಿವುಳ್ಳವನಾಗಿದ್ದಾನೆ. ಸಮರಾಂಗಣದಲ್ಲಿ ಗುರು ದ್ರೋಣರ ಶವವನ್ನು ಕಂಡೊಡನೆಯೆ,

"ಅಱಿಯಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ
ನೆಱಿಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ಕದು ನಿಮ್ಮುಪೇಕ್ಷೆಯಿಂ-
ದಱಿಯೆನಿದೆನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವುಮೇ-
ತೆಱದಿನಕಾರಣಂ ನೆಱಿಯೆ ಸಂಭವಿಸಿರ್ದುದೊ ಕುಂಭಸಂಭವಾ ?"

ಎಂದು ಪಶ್ಚಾತ್ತಾಪ ಪಡುವನು. ಅವರ ಮರಣಕ್ಕೆ ತಾನೇ ಕಾರಣವೆಂದು ಶರಣು ಹೋಗುವನು. ಪಶ್ಚಾತ್ತಾಪದಿಂದ ಪರಿಹಾರವಾಗದ ಪಾಪವಿಲ್ಲೆಂದು ಹೇಳುವುದುಂಟು. ಈಗ ಸುಯೋಧನ ಅಂತಹ ಪಾಪದಿಂದ ವಿಮುಕ್ತನಾಗಿದ್ದಾನೆ. ತನ್ನ ಕರ್ಮವಶದಿಂದ ಈ ಘಟನೆ ಸಂಭವಿಸಿದೆಯೆಂಬ ಪ್ರಜ್ಞೆಯುಂಟಾದುದೊಂದು ವಿಶೇಷ. ಪೌರುಷ ಈಗ ಕೆಳಗಿಳಿದಿದೆ; ವಿಧಿ ಮೇಲೇರಿದೆ. ಇಂತಹ ಸ್ಥಿತಿಯಲ್ಲಿಯೇ ಸುಯೋಧನನು ಅಭಿಮನ್ಯು ಕುಮಾರನ ಕಳೇಬರವನ್ನು ಕಾಣುವನು. ವೈರಿಪುತ್ರನ ಶವದ ದರ್ಶನ ಮಾತ್ರದಲ್ಲಿಯೇ ಆತನಲ್ಲಿ ಉಂಟಾದ ಪ್ರತಿಕ್ರಿಯೆ ಏನು?

" ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ ?"
" ನಿನ್ನಂ ಪೆತ್ತಳ್, ಮೊಲೆವೆತ್ತಳೆ ? ವೀರಜನನಿವೆಸರಂ ಪೆತ್ತಳ್ !"
" ನಿಜಸಾಹಸೈಕದೇಶಾನುಮರಣವೆಮಗಕ್ಕೆ ಗಡಾ !"

ಎಂದು ಆತನನ್ನು ಮೆಚ್ಚಿ ಪೊಗಳ್ದು ಕೈಮುಗಿಯುವನು.

ಒಂದೊಂದು ಸನ್ನಿವೇಶರಚನೆಯಲ್ಲಿಯೂ ಕವಿ ಅಸಾಧಾರಣವಾದ ಜಾಣ್ಮೆಯನ್ನು ವ್ಯಕ್ತಪಡಿಸಿರುವನು. ನಾಟಕದ ಕೇಂದ್ರವ್ಯಕ್ತಿ ಸುಯೋಧನ. ಮಿಕ್ಕೆಲ್ಲ ಪಾತ್ರಗಳೂ ಸನ್ನಿವೇಶಗಳೂ ಘಟನೆಗಳೂ ಆ ಪಾತ್ರಪೋಷಣೆಗಾಗಿಯೇ ಬಳಕೆಯಾಗಿವೆ. ಹೀಗೆಯೇ ದುಶ್ಶಾಸನನನ್ನು ಕಂಡು ಆತನು ಕಣ್ಣೀರಿಡುವ ದೃಶ್ಯ ಕಲ್ಲನ್ನೂ ಕರಗಿಸುವಂತಹದಾಗಿದೆ.

"ಜನನೀಸ್ತನ್ಯಮನುಂಡೆನಾಂ ಬೞಿಕ ನೀಂ ಸೋಮಾಮೃತಂ ದಿವ್ಯಭೋ-
ಜನಮೆಂಬಿಂತಿವನುಂಡೆನಾಂ ಬೞಿಕ ನೀಂ ಬಾಲತ್ವದಿಂದೆಲ್ಲಿಯುಂ
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್
ಮೊನೆಯೊಳ್ ಸೂಟ್ಟಿಡವಾಯ್ತಿದೊಂದೆಡೆಯೊಳಂ ಹಾ ವತ್ಸ
ದುಶ್ಶಾಸನಾ!"

ಎತ್ತರವನ್ನು ಬಿತ್ತರಿಸುವನು. ಮರುಕ್ಷಣದಲ್ಲಿಯೇ ವೈಶಂಪಾಯನ ಸರೋವರ-ತಾವಿಬ್ಬರೂ ತಾಯ ತೋಳ ತೆಕ್ಕೆಯಲ್ಲಿ ಬೆಳೆದುದನ್ನು ಸ್ಮರಿಸಿಕೊಂಡು ಎಲ್ಲದಕ್ಕೂ ತಾನು ಮೊದಲಿಗನಾಗಿ ಮರಣಕ್ಕೆ ಮಾತ್ರ ಹಿಂಚಿದೆನೆಂದು ಉಮ್ಮಳಿಸುವ ಸುಯೋಧನನ ಪಾತ್ರವನ್ನು ಕವಿ ಬಹು ಸ್ವಾಭಾವಿಕವಾಗಿ ಚಿತ್ರಿಸಿದ್ದಾನೆ. ಹಾಗೆಯೆ ಕರ್ಣನ ಕಳೇಬರ ಕಣ್ಣಿಗೆ ಬೀಳುತ್ತದೆ. ಅಂಗಾಧಿಪತಿಯ ಮಿತ್ರತ್ವವನ್ನು ನೆನೆದು ಆತನು ಸುರಿಸುವ ಕಣ್ಣೀರು ಕೋಡಿಯೊಡೆದು ಹರಿಯುತ್ತದೆ.

"ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ
ನೀನುಳ್ಳೊಡುಂಟು ಪೀಟಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತಿ"

ಅಂಗಾಧಿಪತಿಯನ್ನು ಕಳೆದುಕೊಂಡ ಸುಯೋಧನನು ಪ್ರಾಣವಿಲ್ಲದ ಒಡಲಾಗಿ-ದ್ದಾನೆ. ಅವರಿಬ್ಬರೂ ಒಡಲೆರಡು ಜೀವವೊಂದೆಯಾಗಿ ಬೆಳೆದವರು. ಅಂತಹ ಕರ್ಣನಳಿದ ಮೇಲೆ ಅವನಿಗೆ ವಿಶ್ವವೇ ಶೂನ್ಯವಾಗಿರುವುದು. ಆತನ ಸಖ್ಯ-ಭಾವನೆಯ ಕೊನೆಯಾಗಿದೆ.

೬. ಭೀಷ್ಮದರ್ಶನ :

ಸುಯೋಧನ ಕೊನೆಗೊಮ್ಮೆ ಭೀಷ್ಮರಲ್ಲಿಗೆ ಬಂದುದಾಯಿತು. 'ಧವಳ ಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ'ಇಲ್ಲದೆ ಬರುತ್ತಿರುವ ಚಕ್ರವರ್ತಿ ಸುಯೋಧನನನ್ನು ಕಂಡು ಭೀಷ್ಮರಂತಹ ಸ್ಥಿತಪ್ರಜ್ಞರ ಹೃದಯವೂ ಕರಗಿ ಹೋಗುವುದು. ಸಂಧಾನದ ಪ್ರಶ್ನೆಯನ್ನು ಅವರು ಮುಂದೊಡ್ಡಲು,

"ನೆಲಕಿಱಿವೆನೆಂದು ಬಗೆದಿರೆ
ಛಲಕಿಱಿವೆಂ,ಪಾಂಡುಸುತರೊಳೀ ನೆಲನಿದು ಪಾ
ಟ್ನೆಲನೆನಗೆ,ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ದಪೆನೇ ?"

ಎಂದು ತಾನು ಛಲವನ್ನೇ ಬಲ್ವಿಡಿವಿಡಿದುದನ್ನು ಭೀಷ್ಮರೆದುರಿಗೆ ಸ್ಪಷ್ಟವಾಗಿ ನುಡಿಯುವನು. ಆತನ ಮನಃಸ್ಥೈರ್ಯವನ್ನು ಕಂಡು 'ಮೆಚ್ಚಿ ಪೊಗಳ್ದಂ ಮಂದಾಕಿನೀನಂದನಂ' ಎಂದು ಕವಿ ಹೇಳಿ ಸುಯೋಧನ ಭೀಷ್ಮರ ಮನದ

ದಲ್ಲಿ ಕೃಪಾಶ್ವತ್ಥಾಮರು ಬರುವವರೆಗೆ ಮುಳುಗಿದ್ದು ಕಾಲಕ್ಷೇಪ ಮಾಡಬೇಕೆಂದು ಉಪದೇಶ ಮಾಡಿದ ಭೀಷ್ಮರ ವ್ಯಕ್ತಿತ್ವ ಒಮ್ಮೆಲೇ ರಸಾತಳಕ್ಕೆ ಇಳಿದಂತಾಗುತ್ತದೆ.

ಪ್ರಾಯಃ ಸಮಾಪನ್ನವಿಪತ್ತಿಕಾಲೇ
ಧೀಯೋಽಪಿ ಪುಂಸಾಂ ಮಲಿನೀ ಭವಂತಿ

ಎಂದು ವಾಲ್ಮೀಕಿಮಹರ್ಷಿ ಹೇಳಿದ ಮಾತು ಸತ್ಯವೆಂದು ತೋರುತ್ತದೆ. ವಿಪತ್ತು ಸಂಭವಿಸುವ ಕಾಲದಲ್ಲಿ ಮಹಾತ್ಮರ ಮನಸ್ಸೂ ಕೂಡ ಮೋಹಕ್ಕೆ ಒಳಗಾಗುತ್ತದೆಯಂತೆ; ಭೀಷ್ಮರಿಗೂ ಹಾಗಾಗಿರಬಹುದೇನೊ!

೭. ವೈಶಂಪಾಯನ ಸರೋವರ ರಹಸ್ಯ :

ಸುಯೋಧನನಿಗೆ ಎರಿಳಿವುಗಳೆರಡೂ ಉಂಟು. ಒಮ್ಮೆ 'ಪುರುಷಾಕಾರ ಮನೆ ಬಲ್ವಿಡಿವಿಡಿವೆಂ' ಎಂದು ಗಟ್ಟಿಯಾಗಿ ಹೇಳಿದರೆ, ಇನ್ನೊಮ್ಮೆ ಪ್ರಾಣೋಪಾಯದ ಹಾದಿಯನ್ನೂ ಪಾಂಡವರ ಮೇಲೆ ಸೇಡು ತೀರಿಸಿಕೊಳ್ಳುವ ಉಪಕ್ರಮವನ್ನೂ ಎಂತಾದರೂ ಹೇಗಾದರೂ ಸಾಧಿಸಲು ಯತ್ನಿಸುವನು. ಭೀಷ್ಮರ ಉಪದೇಶವಾಗುವುದೊಂದೇ ತಡ, ಸರೋವರವನ್ನು ಪಿಂದು ಪೆಱಗಾಗಿ ಪೊಕ್ಕ; ತನ್ನನ್ನು ಅರಸುತ್ತ ಬಂದವರಿಗೆ ಅರಿಮೆಯಾಗದಿರಲೆಂಬುದೇ ಹೀಗೆ ಮಾಡಿದುದರ ಉದ್ದೇಶ. ಇದನ್ನು ಲೋಕದಲ್ಲಿ ಯಾರೂ ಉದಾತ್ತಮಾರ್ಗವೆಂದು ಕರೆಯಲಾರರು. ಉದಾತ್ತ ನಾಯಕನಿರಲಿ, ಅನುದಾತ್ತ ನಾಯಕನಿರಲಿ, ಪ್ರಾಣ ಎಲ್ಲಕ್ಕಿಂತಲೂ ಹೆಚ್ಚಿನದಲ್ಲವೇ ? ಹೀಗೆ ಪಿಂದು ಪೆರಗಾಗಿ ಸರೋವರವನ್ನು ಹೊಕ್ಕ ಸುಯೋಧನನನ್ನು ಕಂಡು ಅಲ್ಲಿಯ ಜಲಚರಗಳು ಚಿಃ ಎಂದಿದ್ದರೆ ಆಶ್ಚರ್ಯವೇನಲ್ಲ. ಕೊನೆಗೆ ಅವನನ್ನು ಅರಸುತ್ತ ಪಾಂಡವರು ಅತ್ತ ಧಾವಿಸುವರು. ಭೀಕರ ಸ್ವರೂಪದ ಭೀಮನ ಕೋಪಾಟೋಪವನ್ನು ನೋಡಬೇಕಿಲ್ಲಿ :

"ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ ಕೊಂದೆಂ ಭವತ್ಸುತರಂ ನೂರ್ವರುಮಂ ಗದಾಪ್ರಹತಿಯಿಂ ದುಶ್ಶಾಸನೋರಃಸ್ಥಳಕ್ಷತಜಾಸೃಗ್ಜಲಸೇಕದಿಂ ತಣಿಪಿದೆಂ ಕೋಪಾಗ್ನಿಯುಮಂ ಬಂದೆನುದ್ಧತನಂ ಕೋಪಕೃತಾಪರಾಧಶತನಂ ನುಂಗಲ್ಕೆ ಪೆಂಗಾಕ್ಷನಂ"

ಎಂದು ಧೀಂಕಿಡುತ್ತ ಬರುವನು. ವೈಶಂಪಾಯನ ಸರೋವರದ ತಡಿಯಲ್ಲಿ ಧರ್ಮರಾಜಾದಿ ಪಿಕ್ಕ ಪಾಂಡವರೆಲ್ಲ ಅನುಕಂಪೆಯಿಂದ ಆಡಿದ ಮಾತುಗಳಿಗೆ

ಸುಯೋಧನನು ಕಿವಿದೆರೆಯದಾಗುವನು. "ಈ ಬೂತು ಎನ್ನ ಸರಂಗೇಳ್ದಲ್ಲದೆ ಪೋಜಿಮಡದೆ"ಂದು ಆರ್ಭಟಿಸುತ್ತ ಭೀಮನು ತನ್ನ ಗದೆಯಿಂದ ಸರೋವರವನ್ನು ಕಲಕುವನು.

ಆ ರವಮಂ ನಿರ್ಜಿತಕಂ-
ಠೀರವರವಮಂ ನಿರಸ್ತ ಘನರವಮಮಂ ಕೋ
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ

ನೀರಲ್ಲಿ ಬೆಮರ್ತ ಸನ್ನಿವೇಶವೊಂದು ಲೋಕಾನುಭವ ಕಾವ್ಯಾನುಭವಗಳೆರಡರಲ್ಲಿಯೂ ಅಪೂರ್ವಾನುಭವ. ಆಗ 'ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನ'ನು ಸರೋವರದಿಂದ ಹೊರಗೆ ಬಂದು ಭೀಮನ ಕೋಪಾಟೋಪಕ್ಕೆ ಪ್ರತ್ಯುತ್ತರ ಕೊಡುವನು. ಯುದ್ಧಕ್ಕೆ ಪಾಂಡವರೈವರಲ್ಲಿ ಬೇಕಾದವರನ್ನು ಆಯ್ದುಕೊಳ್ಳಬೇಕೆಂಬ ಸೂಚನೆಗೆ ಭೀಮನನ್ನೇ ಆಯ್ದುಕೊಳ್ಳುವ ವಿವೇಕ ಆತನಲ್ಲಿ ಉಂಟಾಗುತ್ತದೆ.

"ಪುಟ್ಟಿಂ ಸಟ್ಟುಗಮಂ ಕೊಂ
ಡಟ್ಟಾಜಿಸಿ ಬೋನವಿಟ್ಟು ಬಂದೆಯೊ ?"

ಎಂದು ಮೂದಲಿಸಿ ಪ್ರಶ್ನಿಸುವನು. 'ನೆನೆ ಚಿತ್ರಾಂಗದನಿಂದಮಂದು ನಿನಗಾದಾ ಬನ್ನಮಂ ಕೌರವಾ' ಎಂದು ಭೀಮನು ಮೂದಲಿಕೆಯಿಂದಲೇ ಉತ್ತರಿಸುವನು. ಗದಾಯುದ್ಧ ಆರಂಭವಾಗುವುದು.

"ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋ
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಸ್ಸ್ಥಳ-
ಕ್ಷರದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ ಮೂಱುಗೊಳ್ಳೆ"ಂದು ಮ-
ಚ್ಚರದಿಂದೋವದೆ ಪೊಯ್ದನೆತ್ತಿ ಗದೆಯಿಂ ದುರ್ಯೋಧನಂ ಭೀಮನಂ ॥
"ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂ-
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನಭ್ರಾಂತಿಗೆಂದೋ-
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋ-
ಪದಿನೈದುಂ ದುರ್ನಯಕ್ಕೈದೆಡೆಯನುರುಗದಾದಂಡದಿಂ ಭೀಮಸೇನಂ"

ಹೀಗೆ ಪ್ರಕೃತಿಯ ಎರಡು ಶಕ್ತಿಗಳೇ ಸಿಡಿಲಾಗಿ ಒಂದಕ್ಕೊಂದು ಎರಗುವಂತೆ ಮಾತಿನ ಮಿಂಚು, ಗದೆಯ ಆಘಾತಗಳಿಂದ ಹೋರಾಡುವರು. ಭೀಮನು ಮೂರ್ಛೆಹೋಗಿ ಬೀಳಲು, ಆ ಸ್ಥಿತಿಯಲ್ಲಿ ಹೊಡೆಯುವದು ಅಧರ್ಮವೆಂದು ಬಗೆದು ಕೌರವನು ತನ್ನ ಗದೆಯಿಂದ ಗಾಳಿಬೀಸಿ ಎಚ್ಚರಿಸುಸುವನು. ತ್ರಿಲೋಕ ಸೂತ್ರಧಾರಿಯಾದ ಶ್ರೀಕೃಷ್ಣನು ತನ್ನ ತೊಡೆ ಚಪ್ಪರಿಸಿಕೊಂಡ ಸಂಜ್ಞೆಯ ಮರ್ಮವನ್ನರಿತು ಭೀಮನು ಸುಯೋಧನನ ತೊಡೆಗೆ ಹೊಡೆಯುವನು. ಆಗ 'ಕುಲಗಿರಿ ಕೆಡೆವಂದದೆ ಕೆಡೆದು ಕೌರವೇಂದ್ರಂ ಮಡಿದಂ'. ಭೀಮನ ಅಧರ್ಮ ಕೌರವನ ಪ್ರಾಣವನ್ನು ಹೀರಿತು. ಬಲದೇವಾದಿಗಳು ಆಗದಾಗದೆಂದು ಬೆಸಗೊಂಡರೂ ಉದ್ರಿಕ್ತನಾದ ಭೀಮನು ಸತ್ತುಬಿದ್ದ ಸುಯೋಧನನನ್ನೊದೆದು ತನ್ನ ಪ್ರತಿಜ್ಞೆ ಪೂರೈಸುವನು.

"ಇದಱೊಳ್ ಮೂರ್ಧಾಭಿಷಿಕ್ತರ್ ಮಣಿಮಕುಟಧರರ್ ಕೃಷ್ಣೆ
ಬಾಹಾಬಳಾಗ್ರ್ಯರ್
ಕದನಪ್ರೋಚ್ಚಂಡದಂಡಕ್ರಮವಿಜಿತರಿಪುಕ್ಷತ್ರಿಯರ್ ವೀರಲಕ್ಷ್ಮೀ
ಸದನರ್ ಸೋಮಾಮೃತಾಸ್ವಾದನರುಚಿವದನರ್
ಮುನ್ನಮಟ್ಟಾಡಿದರ್ ನೋ
ಡಿದು ನಿನ್ನೀ ಕೇಶಪಾಶಂ ಕುರುಕುಲಪತಿಗಾಯ್ತಲ್ತೆ ಕೀನಾಶಪಾಶಂ !"

ಎಂದು ದ್ರೌಪದಿಯ ವೇಣೀಸಂಹಾರ ಮಾಡುವನು.

## ೭. ಅಶ್ವತ್ಥಾಮ ಸಂದರ್ಶನ :

ಮಹಾಭಾರತದಲ್ಲಿ ಅಶ್ವತ್ಥಾಮನು ಯಾವಾಗಲೂ ಸಮಯತಪ್ಪಿ ಸಂಪ್ರಾಪ್ತನಾಗುವ ಮಹಾವ್ಯಕ್ತಿ. ಸುಯೋಧನನ ಪ್ರಾಣೋತ್ಕ್ರಮಣ ಕಾಲದಲ್ಲಿ ಅಲ್ಲಿಗೈತಂದು ತಾನು ಪಾಂಡವರ ತಲೆಯನ್ನು ತರುವ ವರೆಗೂ ಪ್ರಾಣ ಹಿಡಿದಿರಬೇಕೆಂದು ಪ್ರಾರ್ಥಿಸುವನು. ಪಾಂಡವರ ಶಿರಶ್ಛೇದವಾದುದನ್ನು ಕಂಡು ಸಾಯುವುದೆಂದರೆ ಛಲದಂಕಮಲ್ಲನಿಗೆ ಸೌಭಾಗ್ಯದ ಮಾತಲ್ಲವೆ? ದಾಯಾದಮಾತ್ಸರ್ಯಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನವೇ ಬೇಕಿಲ್ಲವೆನಿಸುತ್ತದೆ. ಆದರೆ ಕೃಷ್ಣನ ತಂತ್ರದಿಂದಾಗಿ ಪಾಂಡವರು ಅಶ್ವತ್ಥಾಮನ ಕೈಗೆ ಸಿಕ್ಕುವುದಿಲ್ಲ.

ದಿಗ್ಭ್ರಮೆಗೊಂಡ ಅವನು ಉಪಪಾಂಡವರ ತಲೆಗಳನ್ನು ತರಿದು ತಂದು, 'ಕೊಳ್, ನಿನ್ನ ನೆಚ್ಚಿನ ಪಾಂಡವರ ತಲೆಗಳಿವೆ' ಎಂದು ಅವನ ಮುಂದಿರಿಸುತ್ತಾನೆ. ನಿರಪರಾಧಿ ಶಿಶುಹತ್ಯೆಗೆ ಕೌರವನು ಮನಮರುಗಿ ಕೊನೆಯುಸಿರು ಬಿಡುತ್ತಾನೆ :

"ಪರಮೇಶ್ವರಾವತಾರನೆ
ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾ-
ಲರ ತಲೆಯನರಿದು ತಂದೆಯೊ
ದೊರೆಕೊಂಡುದೆ ನಿನಗೆ ಪಾತಕಂ ಬಾಲವಧಂ !"

ಗದಾಯುದ್ಧದ ನೈಜನಾಟಕ ಇಲ್ಲಿಗೆ ಮುಕ್ತಾಯವಾಯಿತು. ಈ ನಾಟಕದ ಹೃದಯವನ್ನು ಪರೀಕ್ಷಿಸಿದರೆ, ಸುಯೋಧನನ ಪಾತ್ರ ಮಹಾಕವಿ ರನ್ನನ ಮನವನ್ನು ಸೂರೆಗೊಂಡುದು ಸ್ಪಷ್ಟವಾಗುತ್ತದೆ. ಭೀಮನಲ್ಲಿ ಇರಿವ ಬೆಡಂಗನನ್ನು ಆರೋಪಿಸಬೇಕೆಂಬುದು ಕವಿಸಂಕಲ್ಪವಾಗಿದ್ದರೂ ಅವನ ಚಿತ್ತ ಸದಾ ಕೇಂದ್ರೀಕೃತಕವಾಗಿರುವುದು ಸುಯೋಧನನಲ್ಲಿಯೆ. ಈ ಪಾತ್ರವನ್ನು ನಿರೂಪಿಸುವಲ್ಲಿ ಅಸಾಧಾರಣ ಸತ್ಯದರ್ಶನವೊಂದು ಈ ಕವಿಗಳಿಗೆ ಆಗಿರುವುದನ್ನು ಸ್ಮರಿಸಬೇಕು. ಗದಾಯುದ್ಧದ ಮಾತೆತ್ತಿದೊಡನೆ ಪಂಪಭಾರತದ ೧೩ನೆಯ ಆಶ್ವಾಸ ತಪ್ಪದೇ ಸ್ಮರಣೆಗೆ ಬರುವುದು. ಭಾವ, ಭಾಷೆ, ಸನ್ನಿವೇಶಗಳಲ್ಲಿ ಪಂಪನ ಪ್ರಭಾವ ರನ್ನನ ಮೇಲಾದುದು ಒಡೆದು ಕಾಣುತ್ತದೆ. ಅವರಿಬ್ಬರು ಕಾವ್ಯಮಾರ್ಗದಲ್ಲಿ, ಜೀವನಮಾರ್ಗದಲ್ಲಿ ಒಂದೇ ನಿಟ್ಟಿನಲ್ಲಿ ನಡೆದವರು. ಜೀವನ ದರ್ಶನವಾಗದೆ ಕಾವ್ಯಸ್ಫುರಣೆಯಾಗದು. ಗದಾಯುದ್ಧದ ಸುಯೋಧನನ ದುರಂತ ಚಿತ್ರ ಮಾನವ ಜೀವನದಲ್ಲಿ ಕವಿ ಕಂಡ ಸತ್ಯದರ್ಶನದ ಪ್ರತಿರೂಪ ಲೋಕದಲ್ಲಿ ಮಾನವನಲ್ಲಿ ಅವನು ಎಷ್ಟೇ ಸದ್ಗುಣಮಂಡಿತನಾಗಿದ್ದರೂ ಹಲಕೆಲವು ದೌರ್ಬಲ್ಯಗಳು, ದುರ್ಗುಣ ರಾಶಿಯಂತಿದ್ದರೂ ಸದ್ಗುಣದ ಅಂಶಗಳು ಇದ್ದೇ ಇರುತ್ತವೆ. ಮಾನವನ ಏಳು ಬೀಳುಗಳು ಒಂದೆಡೆ ವಿಧಿಯ ಕೈಲಿದ್ದರೂ, ಇನ್ನೊಂದೆಡೆ ದೌರ್ಬಲ್ಯಗಳು ಅವನನ್ನು ರಸಾತಳಕ್ಕೆ ಮೆಟ್ಟುತ್ತವೆ. ಹಿಂದೆ ರುದ್ರನಾಟಕಗಳನ್ನು ರಚಿಸಿದ ಗ್ರೀಕ ಕವಿಗಳಿಗೆ ದೈವೀ ಶಕ್ತಿ ಮಾನವನನ್ನು ನುಂಗಿ ನೊಣೆಯುತ್ತಿದ್ದುದು ಕಂಡಿತ್ತು. ಮುಂದೆ ಆಂಗ್ಲ ಮಹಾಕವಿ ಶೇಕ್ಸ್ಪಿಯರನಿಗೆ ವಿಧಿಗಿಂತ ಮಾನವನ ದೌರ್ಬಲ್ಯಗಳೇ ಅವನ

ನಾಶಕ್ಕೆ ಕಾರಣ ಎಂಬುದು ಕಂಡಿತು. ಕನ್ನಡದ ಮಹಾಕವಿಗಳಾದ ಪಂಪ ರನ್ನರಲ್ಲಿ ಈ ಎರಡೂ ದರ್ಶನಗಳ ಸರಸ ಸಂಗಮವನ್ನು ಕಾಣುತ್ತೇವೆ. 'ಪ್ರತಿಕೂಲದೈವನ್ನೆ ನೀಂ', 'ಎನ್ನ ಕರ್ಮವಶಮೆಂದಱಿಯೆಂ' ಎಂಬಂತಹ ಉದ್ಗಾರಗಳು ಪೌರುಷವಾದಿಯಾದ ಸುಯೋಧನನ ಬಾಯಿಂದ ಬರುತ್ತಿರುವುದನ್ನು ಕೇಳಬೇಕು. ಕೊನೆಗೆ 'ಜಲಮನೆ ಬಲ್ವಿಡಿವಿಡಿವೆಂ, 'ನೆಲಕಿೞಿವೆನೆಂದು ಬಗೆದಿರೆ ಜಲಕಿೞಿವೆಂ' ಎಂದು ಛಲಕ್ಕಾಗಿ ಕಾದಿ, ಛಲದಿಂದಲೇ ಅಧಃಪತನವನ್ನು ಹೊಂದಿದ ದರ್ಶನವು ಕಾವ್ಯದಲ್ಲಿಯೆ ಇದೆ. ಹೀಗೆ ಗದಾಯುದ್ಧವು ಉಭಯಜಾತಿಯ ರುದ್ರನಾಟಕದ ಅಂಶಗಳನ್ನು ಒಳಕೊಂಡಿದ್ದರೂ ಅದೊಂದು ಭಾರತೀಯ ಪರಂಪರೆಯ ವಿಶಿಷ್ಟ ನಾಟಕಗಳ ಸಾಲಿನಲ್ಲಿ ನಿಲ್ಲುತ್ತದೆ.

ರನ್ನನು ಸಂಭಾಷಣಕಲೆಯಲ್ಲಿ ನಿಪುಣ. ಉತ್ತಮ ನಾಟಕಕಾರರ ಶ್ರೇಣಿಯಲ್ಲಿಯೇ ನಿಂತಿರುತ್ತಾನೆ. ಮಿಂಚಿನಂತಹ ಪ್ರತಿಭೆ, ಸಿಡಿಲಿನಂತಹ ಉಕ್ತಿ, ಚತುರ ಸಂಭಾಷಣೆ, ಪಾತ್ರಗಳ ಮನೋವಿಶ್ಲೇಷಣೆ, ಜೀವನ ದರ್ಶನ ಇವೆಲ್ಲ ದೃಷ್ಟಿಯಿಂದಲೂ ಗದಾಯುದ್ಧವು ಶ್ರೇಷ್ಠನಾಟಕವನ್ನು ಅಳವಡಿಸಿಕೊಂಡಿದೆ ಎಂದು ಹೇಳಿದರೆ ಸತ್ಯದ ವಿಪರ್ಯಾಸವಲ್ಲ. ಆತನಿಂದ ಕನ್ನಡದ ಶ್ರೀಮಂತಿಕೆ ಹೆಚ್ಚಿದೆ.

ಆರಾತೀಯ ಕವೀಶ್ವರ<br>
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ-<br>
ಡಾರದ ಮುದ್ರೆಯನೊಡೆದಂ<br>
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ

# ರನ್ನನ ಕಾವ್ಯಶೈಲಿ

ಅಱಿಕೆಯ ಗಟ್ಟಗೆಯುಂ ಪೆ
ರ್ದೊಱೆಯುಂ ಪರಿದಲ್ಲಿ ತದ್ದವಾಡಿಗೆ ತೆಂಕಲ್
ತೊಱಿಗಲೆಗೆ ಬಡಗಲಿರ್ದುದು
ನೆಱಿಯ ಸುಖೋದ್ದೀಪಮೆನಿಸಿ ಬೆಳುಗಲಿ ದೇಶಂ

ಬೆಳುಗಲಿ ದೇಶವು ಸುಖೋದ್ದೀಪಮಾದುದು.

ಬೆಳಗಲಿಯಯ್ನೂಱರೊಳ
ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ
ತಿಳಕಮೆನೆ ನೆಗಟ್ದ ಮುದುವೊಳ
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ

ಬೆಳುಗಲಿ ನಾಡಿನಲ್ಲಿ ಶ್ರೇಷ್ಠವಾದುದು ಜಂಬುಖಂಡಿ. ಅದಕ್ಕೆ ತಿಲಕಪ್ರಾಯವಾದುದು ಮುದುವೊಳಲು. ಅಲ್ಲಿ ಹುಟ್ಟಿ ಸುಪುತ್ರನಾದವ ಕವಿರತ್ನ. ಅಂತಹ ಕವಿ ರನ್ನನ ಕಾವ್ಯಶೈಲಿಯ ಬಗೆಗೆ ಅರಿತುಕೊಳ್ಳುವುದು ನಮ್ಮ ಉದ್ದೇಶ.

ಕವಿಯ ಶೈಲಿಯೆಂದಾಗ ಆತನು ಭಾಷೆಯನ್ನು ಬಳಸುವಲ್ಲಿ, ಭಾವಗಳನ್ನು ನಿರೂಪಿಸುವಲ್ಲಿ ತೋರುವ ಕಲೆಯೆಂದು ಸ್ಥೂಲವಾಗಿ ಹೇಳಬಹುದು. ಕವಿಯು ಪ್ರತಿಪಾದಿಸಬೇಕೆಂದಿರುವ ರಸಭಾವಗಳಿಗೆ ಅನುಗುಣವಾಗುವಂತೆ ಭಾಷೆಯ ಹೊಂದಾಣಿಕೆಯಿದ್ದರೆ ಅದು ನಮ್ಮ ಮೆಚ್ಚುಗೆಯನ್ನು ಪಡೆಯುತ್ತದೆ. ಅರ್ಥಾತ್ ಕಾವ್ಯವಸ್ತುವಿಗೂ ಶೈಲಿಗೂ ಪರಸ್ಪರ ಹೊಂದಿಕೆಯಿರಬೇಕು. ಆದುದರಿಂದ ಕಾವ್ಯವಸ್ತುವನ್ನು ಶೈಲಿಯಿಂದ ಪ್ರತ್ಯೇಕಗೊಳಿಸಿ ಪರೀಕ್ಷಿಸು-ವಂತಿಲ್ಲ. ಕವಿಯ ಚಿತ್ತವೃತ್ತಿಯ ಪ್ರತಿಬಿಂಬದಂತೆ ಶೈಲಿಯಿದೆ. ಒಬ್ಬೊಬ್ಬ ಕವಿಯ ಚಿತ್ತವೃತ್ತಿಯು ಒಂದೊಂದು ಬಗೆಯಾಗಿರುವುದರಿಂದ ಕವಿಯ ಶೈಲಿಯಲ್ಲಿ ಆತನ ವ್ಯಕ್ತಿವಿಶೇಷವನ್ನು ಕಾಣಬಹುದು. ಪ್ರಾಚೀನ ಕನ್ನಡ ಕವಿಗಳ ಶೈಲಿಯು ಏಕರೂಪದ್ದಾಗಿದೆಯೆಂದು ಸಾಮಾನ್ಯವಾಗಿ ಹೇಳಲಾಗು

ತ್ತಿದೆ. ಆದರೆ ತಮ್ಮ ವಿಶಿಷ್ಟ ಶೈಲಿಯಿಂದ ಪ್ರಸಿದ್ಧರಾದ ಕೆಲವು ಕವಿಗಳೂ ಇದ್ದಾರೆ. ಅಂತಹರಲ್ಲಿ ರನ್ನನಿಗೆ ಮಹತ್ವದ ಸ್ಥಾನವಿದೆ.

ರನ್ನನ ಕಾವ್ಯರಚನೆಯಲ್ಲಿಯೇ ಒಂದು ವೈಶಿಷ್ಟ್ಯವಿದೆ. ಆತನ 'ಸಾಹಸಭೀಮವಿಜಯ' (ಗದಾಯುದ್ಧ)ವು ಹತ್ತು ಆಶ್ವಾಸಗಳ ಚಿಕ್ಕ ಕೃತಿಯಾಗಿದೆ. ಅದರಲ್ಲಿ ಸಿಂಹಾವಲೋಕನ ಕ್ರಮದಿಂದ ಮಹಾಭಾರತದ ಇಡಿಯ ಕತೆಯನ್ನು ಅಳವಡಿಸುವ ಜಾಣ್ಮೆಯಿದೆ. ಈ ಕಾವ್ಯವು ನಾಟಕೀಯತೆಯ ನೈಪುಣ್ಯದಿಂದ ಕೂಡಿ ಪರಿಣಾಮಕಾರಿಯಾಗಿದೆ. ಪಾತ್ರಪೋಷಣೆ, ಸಂಭಾಷಣೆಯ ಸ್ವಾರಸ್ಯ, ದೃಶ್ಯಗಳ ಹೊಂದಾಣಿಕೆ, ರಸಪ್ರತಿಪಾದನೆಗಳಿಂದ ಕೂಡಿದ ಈ ಕೃತಿಯನ್ನು ನಾಟಕಕ್ಕೆ ಅಳವಡಿಸಿಯೂ ಆಗಿದೆ. ಅದು ತುಂಬ ಪರಿಣಾಮಕಾರಿಯಾಗಿ ರನ್ನನ ಶೈಲಿಯ ಹಿರಿಮೆಯನ್ನು ಸ್ಥಾಪಿಸಿದೆ. ಗದಾಯುದ್ಧವು ಇತರ ಕವಿಗಳಿಂದ ರಚನಾ ಸಾಮಗ್ರಿಯನ್ನು, ಕೆಲವೊಂದು ಪದಗಳನ್ನು ಸ್ವೀಕರಿಸಿಯೂ ಕೂಡ ತನ್ನದೇ ಆದ ನವೀನತೆಯನ್ನು ಪಡೆದಿರುವ ಕೃತಿಯಾಗಿದೆ. ಆದಿಕವಿ ಪಂಪನಿಂದ ರನ್ನನು ಪ್ರಯೋಜನ ಪಡೆದಿರುವುದೂ ನಿಜ. ಆದರೆ ಚಿಕ್ಕ ಗಾತ್ರದ ಕೃತಿಯಲ್ಲಿ ಇಡಿಯ ಕತೆಯನ್ನು ಸೂಚಿಸಿದ ಜಾಣ್ಮೆ ಆತನದು. ಪಂಪನ ಸೂಚನೆಗಳನ್ನು ಹಿಗ್ಗಿಸಿ, ತನ್ನ ಪದಕೋಶವನ್ನೂ ಸೇರಿಸಿ, ಆರಿಸಿಕೊಂಡ ಭಾಗವನ್ನು ಉಜ್ವಲಗೊಳಿಸಿದ ಶ್ರೇಯಸ್ಸು ರನ್ನನಿಗಿದೆ. ಗದಾಯುದ್ಧ ಕಾವ್ಯದಲ್ಲಿ ವೀರ, ಶೋಕ, ಕರುಣಾರಸಗಳು ಸ್ಫುಟವಾಗಿ ಹೊರಹೊಮ್ಮಿವೆ. ಈತನ ಇನ್ನೊಂದು ಕೃತಿಯಾದ ಅಜಿತಪುರಾಣವು ಜೈನ ಪುರಾಣಗಳ ಸಾಂಪ್ರದಾಯದಂತೆ ರಚಿತವಾಗಿದೆ. ಆದರೂ,

ಎನಿತೋಳವು ಮನದ ಸಂದೆಯ
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ
ಪ್ಪನುನಾಗಮೊದವುಗುಂ ರ
ತ್ನನ ಪೇಟ್ದಜಿತನ ಪುರಾಣಮಂ ಕೇಳಲೊಡಂ

ಎಂಬುದು ಕವಿವಿಯ ಆತ್ಮಶ್ವಾಸದ ಹೇಳಿಕೆಯಾಗಿದೆ. ಮನದ ಸಂದೇಹಗಳೆಲ್ಲ ಅಳಿಯುವಂತೆ ಅಸಂದಿಗ್ಧವಾಗಿ ಹೇಳುವುದು ಮತ್ತು ಧರ್ಮದ ಬಗೆಗೆ ಅನುರಾಗವುಂಟಾಗುವಂತೆ ಮಾಡುವುದು ಕವಿಯ ಇಲ್ಲಿಯ ದೃಷ್ಟಿಯಾಗಿದೆ.

ಅಸಂದಿಗ್ಧತೆಯು ರನ್ನನ ಕಾವ್ಯಶೈಲಿಯ ನಿಚ್ಚಳವಾದ ಕುರುಹಾಗಿದೆ. ರನ್ನ ಕವಿಯಲ್ಲಿ ಆತ್ಮವಿಶ್ವಾಸವು ವಿಪುಲವಾಗಿದೆ. ಅದು ಯಥಾರ್ಥವೆಂದೂ ಹೇಳ ಬಹುದಾಗಿದೆ. ಅಜಿತಪುರಾಣದಲ್ಲಿ ಶೃಂಗಾರ, ಅದ್ಭುತ, ಶಾಂತರಸಗಳ ಪ್ರತಿಪಾದನೆಯಿದೆ. ಗದಾಯುದ್ಧದ ವೀರ, ಅಜಿತಪುರಾಣದ ಶಾಂತರಸಗಳ ಪ್ರತಿಪಾದನೆಗೆ ಉಚಿತವಾಗುವಂತಹ ಭಾಷಾ ಶೈಲಿಯನ್ನು ರನ್ನನು ಆಯಾ ಕಾವ್ಯಗಳಲ್ಲಿ ಬಳಸಿದ್ದಾನೆ. ಅಜಿತಪುರಾಣದಲ್ಲಿ ವೈರಾಗ್ಯ ಬೋಧನೆಯು ಹೃದಯವು ಕಂಪಿಸುವಂತೆ ತೀಕ್ಷ್ಣವಾಗಿ ಮೂಡಿಬಂದಿದೆ. ಗದಾಯುದ್ಧದ ವೀರ ಕರುಣೆಗಳೂ ಬಹು ಪರಿಣಾಮಕಾರಿಯಾಗಿ ಪ್ರತಿಪಾದಿತವಾಗಿವೆ. ಇದರಿಂದ ಭಾವ, ಭಾಷೆಗಳ ಹೊಂದಾಣಿಕೆಯು ರನ್ನಕವಿಯಲ್ಲಿ ಸಮರ್ಪಕ ವಾಗಿದೆಯೆಂಬುದು ಕಂಡು ಬರುತ್ತಿದೆ. ಕಾವ್ಯವಸ್ತುವಿಗೂ ಅದರ ಅಭಿವ್ಯಕ್ತಿಯ ಬಗೆಗೂ ಇರುವ ಸುಂದರ ಸಮನ್ವಯವು ರನ್ನನ ಶೈಲಿಯ ಒಂದು ವೈಶಿಷ್ಟ್ಯ ವಾಗಿದೆ.

ಕವಿಕಾವ್ಯದ ಗತಿಗಮ್ಯಗಳ ಬಗೆಗೆ, ಶೈಲಿಯ ಬಗೆಗೆ ರನ್ನನು ಸುಸ್ಪಷ್ಟ ವಾದ ಅಭಿಪ್ರಾಯಗಳನ್ನಿಟ್ಟುಕೊಂಡವನಾಗಿದ್ದಾನೆ. ಅವುಗಳನ್ನು ಅರಿತು-ಕೊಳ್ಳಲು ನಾವು ಆತನ ಗ್ರಂಥಗಳಲ್ಲಿಯ ಕೆಲವು ಪದ್ಯಗಳನ್ನು ಅವಲೋಕಿಸ ಬೇಕಾಗುತ್ತದೆ.

ಗ. ಯು. I-38.

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ

ಸರಸ್ವತಿಯ ಭಂಡಾರದ ಮುದ್ರೆಯನ್ನು ಒಡೆದ ಶ್ರೇಯಸ್ಸು ತನಗೊಬ್ಬನಿಗೇ ಇದೆಯೆಂಬ ಹೆಮ್ಮೆ ರನ್ನನದಾಗಿದೆ. ಇದು ಆತ್ಮೋಕ್ತಿ. ಆದರೆ ಆತನ ಆತ್ಮ ಪ್ರತ್ಯಯವು ಇಲ್ಲಿ ಮೂಡಿಬಂದಿದೆ. ಪ್ರಯೋಗದಲ್ಲಿಯ ಆತನ ಕುಶಲತೆಯನ್ನು ನಾವು ಮೆಚ್ಚಿಕೊಳ್ಳದೆ ಇರುವುದು ಸಾಧ್ಯವಿಲ್ಲ. ರನ್ನನ ಅತಿಯಾದ ಹೆಮ್ಮೆಯ ಮಾತು ಬೇರೆ.

ಗ. ಯು. I–39.

ರಸಮಂ, ಭಾವಮುಮಂ ಕಾ
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ
ಪೊಸ ದೇಸೆಯ ನುಡಿಗಳೊಳಂ
ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ

ಹೊಸ ಬಗೆಯ ಸೊಬಗಿನ ನುಡಿಗಳಲ್ಲಿ ರಸ, ಭಾವ, ಕಾಳಸ, ಕುಣಿಕೆಗಳನ್ನು ಹೊಂದಿಸುವ ಶಕ್ತಿಯಲ್ಲಿ ತಾನು ಚತುರ್ಮುಖ ಬ್ರಹ್ಮನೆಂದು ರನ್ನನು ತನ್ನನ್ನು ವರ್ಣಿಸಿಕೊಂಡಿದ್ದಾನೆ. ರಸಭಾವಗಳನ್ನು ಉಜ್ವಲಗೊಳಿಸುವ ಪದಮೈತ್ರಿಯು ಆತನ ಕೃತಿಗಳಲ್ಲಿ ಕಂಡುಬರುತ್ತಿದೆ. ಇದು ರನ್ನನ ಶೈಲಿಯ ಇನ್ನೊಂದು ವೈಶಿಷ್ಟ್ಯವಾಗಿದೆ. ಚತುರ್ಮುಖ ಬ್ರಹ್ಮನೆಂದು ಹೇಳಿಕೊಂಡಿರುವುದು ಮಾತ್ರ ಉತ್ಪ್ರೇಕ್ಷೆ.

ಗ. ಯು. I–42.

ಕನ್ನಡಮೆರಡಱನೂಱಱ
ಕನ್ನಡಮಾ ತಿರುಳ ಕನ್ನಡಂ ಮಧುರಮ್ಮೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗಟ್ದುಭಯ ಕವಿತೆಯೊಳ್ ಕವಿರನ್ನಂ

ತಿರುಳ್ಗನ್ನಡ, ಮಧುರ ಸಂಸ್ಕೃತ ಇವೆರಡನ್ನೂ ಸಮರ್ಪಕವಾಗಿ ಬಳಸಬಲ್ಲ ಉಭಯಭಾಷಾಪಾಂಡಿತ್ಯ ರನ್ನನಿಗಿದೆ. ಇನ್ನೊಂದು ಪದ್ಯದಲ್ಲಿ 'ಶ್ರುತ ರಮಣೀಯರ್ಂ', 'ಕವಿತಾ ಚತುರಂ' ಎಂದು ರನ್ನನು ತನ್ನ ಬಗೆಗೆ ಹೇಳಿಕೊಂಡದ್ದನ್ನು ನಾವು ಒಪ್ಪಬೇಕಾಗುತ್ತದೆ. ಭಾವಕ್ಕೆ ಅನುಗುಣವಾಗುವ ಪದಗಳಂತೆ ಈತನು ಕಿವಿಗೆ ಹಿತವಾಗುವ ಪದ್ಯಗಳನ್ನೂ ಬಳಸಬಲ್ಲ ಈತನ ಕವಿತೆಯಲ್ಲಿ ಚಾತುರ್ಯವೂ ಇದೆ.

ಗ. ಯು. I–44.

ರತ್ನಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ

ಮಹಾಸರ್ಪದ ಹಣೆಯಲ್ಲಿಯ ರತ್ನವನ್ನು ಪರೀಕ್ಷಿಸುವವನಿಗೆ ಎಂಟು ಎದೆಗಳು ಬೇಕು. ಒಂದು ಎದೆಯುಳ್ಳ ಸಾಮಾನ್ಯ ಮಾನವನ ರನ್ನ ಕವಿಯ ಕೃತಿಗಳನ್ನು ಪರೀಕ್ಷಿಸಲು ಅಸಮರ್ಥನೆಂದು ರನ್ನನು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಹೆಮ್ಮೆಯು ಈತನ ಸ್ವಭಾವದ ಒಂದು ವೈಶಿಷ್ಟ್ಯವೇ ಆಗಿದೆ. ಆದರೆ ಹೆಮ್ಮೆಗೆ ತಕ್ಕ ಸಾಮರ್ಥ್ಯವನ್ನೂ ಪಡೆದಿದ್ದಾನೆ. ಈ ಪದ್ಯದಲ್ಲಿಯೂ ಅತ್ಯುಕ್ತಿಯಿದೆ.

ತನ್ನ ಪೋಷಕ ದೊರೆಯಿಂದ ರನ್ನನು ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದನು. ಆ ಬಿರುದು ಸಾರ್ಥಕವೆಂದು ಒಂದು ಪದ್ಯದಲ್ಲಿ ವರ್ಣಿಸಿದ್ದಾನೆ;

ಅ. ಪು. 1-86.

ಮತಿಕೋಶಂ ಪದವಿದ್ಯೆಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿಭೇರಿ ಕಳಿತಂ ಸಿಂಹಾಸನಂ ಸಂದಲಂ
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ

ಸರಸ್ವತಿಯೆ ಲಕ್ಷ್ಮಿಯಾದ ಕವಿಚಕ್ರವರ್ತಿಯ ವೈಭವವನ್ನು ಇಲ್ಲಿ ವಿವರಿಸ ಲಾಗಿದೆ. ಇಲ್ಲಿ ಬಂದಿರುವ 'ಪದೋಕ್ತಿಭೇರಿ' ಎಂಬ ಮಾತು ರನ್ನನ ಭಾಷಾ ಶೈಲಿಯನ್ನು ಸಮರ್ಪಕವಾಗಿ ವರ್ಣಿಸುವಂತಿದೆ. 'ಶ್ರುತ ರಮಣೀಯಂ' ಆಗಿ ಹೇಳುವ ರನ್ನನ ಪದಪ್ರಯೋಗದಲ್ಲಿ ಭೇರಿವಾದ್ಯದ ಗಂಭೀರ ಧ್ವನಿಯನ್ನೂ ನಾವು ಕೇಳಬಹುದಾಗಿದೆ. ಈತನ ಕಾವ್ಯಶೈಲಿ ಶಕ್ತಿಸಮನ್ವಿತವಾಗಿದೆ. ಈ ಬಗೆಯ ಶಕ್ತಿಯುಳ್ಳ ಕವಿಗಳು ಕನ್ನಡದಲ್ಲಿ ವಿರಳ.

ಸತ್ಕವಿಯ ಬಗೆಗೆ ರನ್ನನು ಇಟ್ಟುಕೊಂಡ ಅಭಿಪ್ರಾಯವು ಹೀಗಿದೆ:

ಅ ಪು 1-87.

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಸುಗುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ

ಸತ್ಕವಿಯು ನವರಸಗಳನ್ನು ತೆರೆದು ತೋರಿಸಬೇಕು. ಸುಸ್ಪಷ್ಟತೆಯು ಆತನ ಮುಖ್ಯ ಲಕ್ಷಣವಾಗಿರಬೇಕು. ರಸ ಭಾವ ನಿರೂಪಣೆಯಲ್ಲಿ ಅಸ್ಪಷ್ಟತೆಯಿಂದ ಕೂಡಿದ ಕವಿಯು ಕವಿಯೇ ಅಲ್ಲ, ಎಂಬುದು ರನ್ನನ ಅಭಿಪ್ರಾಯವಾಗಿದೆ. ಪದಗಳು ವಿಪುಲವಾಗಿ ಅರ್ಥ ವಿರಳವಾಗಿದ್ದರೆ ಅದೆಂತಹ ಕೃತಿ? ಎಂಬ ಪ್ರಶ್ನೆ ಯನ್ನು ರನ್ನನು ಇನ್ನೊಂದು ಪದ್ಯದಲ್ಲಿ (ಅ. ಪು. I-81) ಎತ್ತಿದ್ದಾನೆ. ಕವಿತೆ ಯಲ್ಲಿ ಅರ್ಥವಿಹೀನ ಪದಗಳನ್ನು ತುಂಬುವುದನ್ನು ಹಾಸ್ಯಮಾಡಿದ್ದಾನೆ.

ಅ. ಪು. I-89

ದರವುರಮುಮಂಟ ಸುಂಟಿಯು
ಮರೆವೊರಕನುಮೆನಿಸಿ ತಱಿತಱಿಂ ನುಡಿದು ಸಭಾಂ
ತರದೊಳ್ ರಂಜಿಪುದೆ ರಸಾಂ
ತರಂಗಳಂ ಮುಟ್ಟೆ ನುಡಿದು ರಂಜಿಸವೇಡಾ

ರಸಾಂತರಂಗಳಂ ಮುಟ್ಟೆ ನುಡಿದು ಕವಿಯು ರಂಜಿಸಬೇಕು. ಹಾಗಿಲ್ಲದೆ ಅರ್ಥರಹಿತ ಪದಪ್ರಯೋಗಗಳಿಂದ ಕಾವ್ಯವನ್ನು ತುಂಬಬಾರದು. ಕವಿಯ ರಸಭಾವ ನಿರೂಪಣೆಯು ನಮ್ಮ ಹೃದಯವನ್ನು ಮುಟ್ಟುವಂತೆ, ತಟ್ಟುವಂತೆ ಕಾವ್ಯದಲ್ಲಿ ಪದಪ್ರಯೋಗವಿರಬೇಕು. ಈ ಬಗೆಯ ಪದಪ್ರಯೋಗದಲ್ಲಿ ನಿಷ್ಣಾತನಾಗಿದ್ದಾನೆ. ಅರ್ಥವು ಸುಸ್ಪಷ್ಟವಾಗುವಂತೆ, ಶಕ್ತಿಯುತವಾಗುವಂತೆ ಪದಗಳನ್ನು ಬಳಸದಿದ್ದರೆ ಈತನಿಗೆ ತೃಪ್ತಿಯಿಲ್ಲ.

ಅ. ಪು. I-91

ಸರಸತಿಯನಬಲೆಯಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹನವನನಾರ್ ಮುಟ್ಟುವರೋ

ದುರ್ಬಲ ಪದಗಳಿಂದ ಕೂಡಿದ ಅರ್ಥವಿರಳವಾದ ಕಾವ್ಯವನ್ನು ರಚಿಸುವುದೇ ಸರಸ್ವತಿಗೆ ದ್ರೋಹ ಮಾಡಿದಂತೆ, ಅಬಲೆಯಾದ ಸರಸ್ವತಿಯ ಗೋಣು ಮುರಿದಂತೆ ಎಂದು ರನ್ನನು ತೀಕ್ಷ್ಣವಾಗಿ ಟೀಕಿಸಿದ್ದಾನೆ. ಈ ದಿಸೆಯಲ್ಲಿ

ಸರಸ್ವತಿಗೆ ದ್ರೋಹ ಮಾಡದೆ ಇರುವ ಕನ್ನಡ ಕವಿಗಳಲ್ಲಿ ರನ್ನನು ಪ್ರಮುಖ ನಾಗಿದ್ದಾನೆ.

ಅ. ಪು. I–91

ಪೊಸ ದೇಸೆಯುಂ ಬೆಡಂಗಂ
ರಸಘಟ್ಟಿಯನರ್ಥದೃಷ್ಟಿಯುಂ ಬಗೆವರೊ ಭಾ
ವಿಸುವರೊ ಸಾರಣೆಯಂತಿರೆ
ಕಸಮುಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್

ಉತ್ತಮ ಕಾವ್ಯದಲ್ಲಿ ಹೊಸಬಗೆಯ ಸೊಬಗಿನ ನುಡಿ, ಬೆಡಗು, ರಸಘಟ್ಟಿ, ಅರ್ಥದೃಷ್ಟಿಗಳೆಂಬ ನಾಲ್ಕು ಗುಣಗಳಿರಬೇಕು. ಈ ಗುಣಗಳನ್ನು ರನ್ನನು ವಿಡಂಬಿಸಿದ್ದಾನೆ.

ಇನ್ನೊಂದು ಪದ್ಯದಲ್ಲಿ(ಅ. ಪು. XII-34) ಉಲ್ಲೇಖಿಸಿದ 'ಉಚಿತೋಕ್ತಿ', 'ಅರ್ಥದೃಷ್ಟಿ', 'ಅಳಂಕೃತಿ' ಎಂಬ ಪದಗಳು ರನ್ನನ ಶೈಲಿಯನ್ನು ಸರಿಯಾಗಿ ಬಣ್ಣಿಸುವ ಪದಗಳಾಗಿವೆ.

ರನ್ನನ 'ಉಚಿತೋಕ್ತಿ'ಗಳಲ್ಲಿ ಕೆಲವನ್ನು ಇಲ್ಲಿ ನೋಡಬಹುದು. ಭೀಮ ದುರ್ಯೋಧನರು ಗದೆಗಳಿಂದ ಒಬ್ಬರನ್ನೊಬ್ಬರು ಹೊಡೆದ ವರ್ಣನೆಯು ಹೀಗೆ ಬಂದಿದೆ :

ಗ. ಯು. VIII-11

ದಪ್ಪರಿದಟ್ಟುಂ ಪೊಟ್ಟನೆ
ದೊಪ್ಪ ಧೊಗಪ್ಪನೆ ದಿಧಿಲ್ಬುಧಿಲ್ಲನೆ ಗದೆಗಳ್
ಸೊಪ್ಪು ಸೊವಡಪ್ಪಿನಂ ಸೂ
ಟ್ರಿಪ್ಪದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್

ವೀರರಿಬ್ಬರ ಗದೆಗಳ ತಾಕಲಾಟದ ಕರ್ಕಶ ಧ್ವನಿಯನ್ನೇ ನಾವು ಇಲ್ಲಿ ಕೇಳಿದಂತಾಗುತ್ತಿದೆ. ಇದೊಂದು ಬಗೆ. ಈ ಸನ್ನಿವೇಶಕ್ಕೆ ಭಿನ್ನವಾದ ವಸಂತಾಗಮನದ ವರ್ಣನೆಯನ್ನು ನೋಡೋಣ :

ಅ. ಪು. VI-14

ಬಂದಿರೆ ಮಾಮರಂಗಳಿರ ಮಲ್ಲಿಗೆ ಬಂದಿರೆ ಕೋಕಿಲಾಳಿನೀ
ವೃಂದಮೆ ಬನ್ನಿಮಿತ್ತ ಶುಕ ನೀ ಸೊಕಮೆ ರಜನೀಚಂದ್ರ ಸೈ
ಪಿಂದಮೆ ಬಂದಿರೇ ಕುಶಲಮೆ ನಿಮಗೆಂದು ಮಧುಪ್ರವೇಶದೊಳ್
ಬಂದು ಮನೋಜನೇನನಿತುಮಂ ಪೆಸರ್ಗೊಂಡನೋ ಕೂಡಿಕೊಂಡನೋ

ವಸಂತ ಋತುವಿನ ಆಗಮನದ ಕಾಲಕ್ಕೆ ಕಾಮನು ಮಾಮರ, ಮಲ್ಲಿಗೆ, ಕೋಕಿಲ, ಶುಕಗಳನ್ನು ಹೆಸರುಗೊಂಡು ಮಾತನಾಡಿಸುತ್ತ ಕುಶಲವ ಕೇಳಿದನಂತೆ. ವಸಂತದ ಮೋಹಕತೆಗೆ ಅನುಗುಣವಾಗುವ ಉಚಿತೋಕ್ತಿಗಳು ಇಲ್ಲಿವೆ. ಗದೆಗಳ ತಾಕಲಾಟದ ಶಬ್ದಪ್ರಯೋಗದೊಂದಿಗೆ ಇಲ್ಲಿಯ ಮಧುರ ಪದಪುಂಜವನ್ನು ಹೋಲಿಸಿ ನೋಡಬೇಕು.

ಗಂಭೀರವಾದ ದೀರ್ಘವಾದ ಸಂಸ್ಕೃತ ಪದಗಳನ್ನು ರನ್ನನು ಔಚಿತ್ಯವರಿತು ಬಳಸುತ್ತಾನೆ.

ಗ. ಯು. VIII-20

ಚರಣಾಕ್ರಾಂತಂ ಮಹೀಮಂಡಲಮುದಿರೆ ಭುಜಾಕ್ರಾಂತಮಾಶಾ-
ಗಜೇಂದ್ರೋ
ತ್ಕರಮಾಶಾಭಿತ್ತಿಯಿಂದ ಪೆಜಿದೆಗೆಯೆ ಗದಾಕ್ರಾಂತಮುದ್ಭ್ರಾಂತವಿದ್ಯಾ
ಧರಚಕ್ರಂ ಗೆಂಟುಗೆಂಟಾಗಿರೆ ನಿಜ ವಿಮಾನಂಗಳಂ ಭೈರವಾಡಂ
ಬರಮಾ ಕಲ್ಪಾಂತಕಾಲಂ ನೆಗಟ್ಟುದು ಸಮರಂ ಭೀಮದುರ್ಯೋ-
ಧನೀಯಂ

ಭೀಮದುರ್ಯೋಧನರ ಸಮರದ ವ್ಯಾಪಕತೆಯನ್ನು ಬಣ್ಣಿಸುವ ಪದಪುಂಜವಿಲ್ಲಿದೆ. ಅಲ್ಲಲ್ಲಿ ತಿರುಳ್ಗನ್ನಡ ಪದಗಳೂ ಕೆಲವು ಬಂದಿವೆ. ಸುದೀರ್ಘ ಸಮಾಸಪದಗಳಿಗಾಗಿ ಗದಾಯುದ್ಧದ ಆರಂಭದ ನಾಲ್ಕು ಪದ್ಯಗಳನ್ನು ಅವಲೋಕಿಸಬೇಕು. ಅಲ್ಲದೆ "ಕುರುರಾಜ ರತ್ನ ಮಕುಟೋತ್ಕೂಟಾಂಘ್ರಿ ಸಂಗರಂ", "ಕುರುರಾಜಾನುಜ ಭೀಕರ ಕರ ವಿಲುಳಿತ ನೀಲ ಕಬರೀ ಭರಮಂ", "ಪ್ರತಿದಿನ ಪ್ರವರ್ತಿಪಾಷ್ಟಾದಶಕೋಟಿ ಸಂತರ್ಪಿತ ಸಕಲ ಭೂಸುರಲೋಕನುಂ" —ಇತ್ಯಾದಿ ಪ್ರಯೋಗಗಳನ್ನು ನೋಡಬಹುದು. ಹೀಗೆ ಘನ ಗಂಭೀರ ಸಂಸ್ಕೃತ

ಪದಗಳನ್ನು ಬಳಸುವ ರನ್ನನು ತಿರುಳ್ಗನ್ನಡ ಪದಗಳನ್ನು, ಜನಪದವಾಣಿಯನ್ನು ಸಮರ್ಪಕವಾಗಿ ಪ್ರಯೋಗಿಸುತ್ತಾನೆ :

ಅಡಿಯಂ ಕಿಱುದೊಡೆಯಂ ಪೆ
ರ್ದೊಡೆಯಂ ಪೊಱವಾರಸುಡಿಯನುರಮಂ
ಮುಡುಪಂ ಬೆನ್ನಂ ಕೊರಲಂ
ನಡುನೆತ್ತಿಯನೆತ್ತಿ ಪೊಯ್ದರೊರ್ವರನೊರ್ವರ್

ಗದೆಗಳ ಪೆಟ್ಟುಗಳು ಅಂಗಾಂಗಗಳ ಮೇಲೆ ಬೀಳುವದನ್ನು ಇಲ್ಲಿ ತಿರುಳ್ಗನ್ನಡ ಪದಗಳಿಂದ ನಿರೂಪಿಸಲಾಗಿದೆ. ರನ್ನನು ಬಳಸಿದ ಜನಪದವಾಣಿಯಿಂದ ಸಂಗ್ರಹಿಸಿದ ಕೆಲವು ಪದಗಳು ಹೀಗಿವೆ :

"ಬಡಿಗೊಂಡು ಗೋಣಪಣ್ಣಂ ಬಡಿವಂತಿರೆ"
"ಅಲ್ಲಿ ಮಿಳ್ಮಿಳನೆ ನೋಡುತ್ತಿರ್ದ"
"ಇಱಿವ ಬೆಡಂಗನ ಕೊರಳೊಳ್ಕೊಂಕುಂಟೆ ನುಡಿಯೊಳ್ತೊದಳುಂಟೆ"
"ನೀರೊಳಗೆಸಡಿರ್ಕುಂ, ಮೀನಿರ್ಕುಂ, ಕಪ್ಪೆಯಿರ್ಕುಮಿಪ್ಪರೆ ಗಂಡರ್"
"ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ
ಮೀಸೆವೊತ್ತ ಣಂಗಳ್"
"ತದ್ರಥದಗಾಲಿಗಳ್ ದೊಡ್ಡಿದುವೇ"
"ನೀಚನಾ, ದ್ರೋಹನಾ, ಚಾಂಡಾಲನಾ"
"ನುರ್ಚುನೂರಾಗೊಡೆವೆಂ"
"ಕುಱಿದಱಿದಱಿದಂ"
"ಗಂಟಲನೊತ್ತುವೆನೋ"
"ಸರೋವರದೆರ್ದೆ ಪವ್ವನೆ ಪಾಱುವಂತೆ" ಇತ್ಯಾದಿ.

ಈ ಪದಗಳು ಆಯಾ ಸನ್ನಿವೇಶಗಳಿಗೆ ಹೊಂದಿಕೊಳ್ಳುವಂತೆ ಸಹಜ ಸುಂದರವಾಗಿ ಮೂಡಿಬಂದಿವೆ. ಅವು ಜನಪದವಾಣಿಯ ಸೊಗಸನ್ನು, ಕೆಚ್ಚನ್ನು ಹೊರಹೊಮ್ಮಿಸುತ್ತಿವೆ.

ರನ್ನನಲ್ಲಿ ಅರ್ಥದೃಷ್ಟಿ, ಸುಸ್ಪಷ್ಟತೆಗಳನ್ನು ನಾವು ವಿಪುಲವಾಗಿ ಕಾಣುತ್ತೇವೆ:

ಗ. ಯು. VIII-19.

ಇದು ಲಾಕ್ಷಾಗೇಹದಾಹಕ್ಕಿದು ವಿಷಮ ವಿಷಾನ್ನಕ್ಕಿದಾನಾಡಜೂದಿಂ
ಗಿದು ಪಾಂಚಾಲೀ ಪ್ರಪಂಚಕ್ಕಿದು ಕೃತಕಸಭಾಳೋಕನ ಭ್ರಾಂತಿಗೆಂದೋ
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋ
ಪದಿನ್ನೈದು ದುರ್ನಯಕ್ಕೈದೆಡೆಯನುರುಗದಾದಂಡದಿಂ ಭೀಮಸೇನಂ

ದುರ್ಯೋಧನನ ಐದು ದುಷ್ಕೃತ್ಯಗಳಿಗೆ ಒಂದೊಂದರಂತೆ ಆತನ ಐದು ಅಂಗಗಳ ಮೇಲೆ ಭೀಮಸೇನನು ಪೆಟ್ಟುಗಳನ್ನು ಹಾಕಿದನಂತೆ. ಈ ಬಗೆಯ ಶೈಲಿಯು ರನ್ನನಿಗೆ ಸ್ವಾಭಾವಿಕವಾಗಿದೆ. ಮರಣ ಸಮೀಪಿಸಿದ ದುರ್ಯೋಧನನನ್ನು ತೊರೆದು ಪಾಂಡವರ ಕಡೆಗೆ ಹೋಗಬೇಕೆಂದು ಕೃಷ್ಣನು ರಾಜ್ಯಲಕ್ಷ್ಮಿಗೆ ಆಜ್ಞೆಮಾಡಿದ. ಆಕೆ ಹಾಗೆ ಹೊರಟಿರುವಾಗ ಅವಳನ್ನು ಅಶ್ವತ್ಥಾಮ ಸಂಧಿಸಿ ಕೋಪೋದ್ರಿಕ್ತನಾಗಿ ತಡೆದು ನಿಲ್ಲಿಸಿದ. ಆಗ ದಿಗ್ಭ್ರಮೆಗೊಂಡ ರಾಜ್ಯಲಕ್ಷ್ಮಿಯನ್ನು ರನ್ನ ಬಣ್ಣಿಸಿದ ಬಗೆಯಿದು :

ಗ. ಯು IX-16.

ಅತ್ತಲಸುರಾರಿ ಬೆಸಸಿದ
ನಿತ್ತಲ್ ರುದ್ರಾವತಾರನೆಟೆದೊಯ್ದಪನೆಂ
ದತ್ತ ಪುಲಿಯಿತ್ತದರಿಯೆಂ
ದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್

ಇಂತಹ ಸುಸ್ಪಷ್ಟತೆ ರನ್ನನದಾಗಿದೆ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಲಂಕಾರಗಳು ಹೇರಳವಾಗಿ ಬಂದು ಕಾವ್ಯಕ್ಕೇ ಭಾರವೆನಿಸಿ ಕೃತಕತೆಯನ್ನು ತರುವುದುಂಟು. ಆದರೆ ರನ್ನನ ಅಲಂಕಾರಗಳು ಸಹಜವೂ ಸುಂದರವೂ ಆಗಿವೆ. ಇಲ್ಲಿ ಒಂದು ಉದಾಹರಣೆಯನ್ನು ನೋಡಬಹುದು :

ಗ. ಯು. II-4.

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ
ಕೆಡುವೊಡಲೊಡಮೆಯನೆಂದುಂ
ಕೆಡದೊಡವೆಗೆ ಮಾಱುಗುಡುವುದಿಱಿವಬೆಡಂಗಾ

ಕೆಡುವ ಒಡಲನ್ನು ಒಡವೆಯನ್ನು ಕೊಟ್ಟು ಕೆಡದ ಸಂಪತ್ತಾದ ಯಶವನ್ನು ಪಡೆಯಬೇಕೆಂದು ದ್ರೌಪದಿಯು ಭೀಮನಿಗೆ ಹೇಳುವ ಮಾತು ಸಹಜವಾಗಿ, ಸ್ಪಷ್ಟವಾಗಿ ಮೂಡಿಬಂದಿದೆ. ಇಲ್ಲಿ ಅಲಂಕಾರವಿರುವಂತೆ ತೋರದೆಯೂ ಪರಿವೃತ್ತ್ಯಲಂಕಾರವನ್ನು ಅಳವಡಿಸಲಾಗಿದೆ. ಉತ್ಪ್ರೇಕ್ಷೆ, ಅತಿಶಯೋಕ್ತಿಗಳನ್ನು ಬಳಸುವಲ್ಲಿಯೂ ಈತನ ಚಾತುರ್ಯವು ಕಂಡುಬರುತ್ತಿದೆ. ಸಗರ ಚಕ್ರವರ್ತಿಯ ದಿಗ್ವಿಜಯದ ವರ್ಣನೆಯ ಸಂದರ್ಭದ ಒಂದು ಪದ್ಯವನ್ನು ನೋಡಬೇಕು :

ಅ. ಪು. IX-17

ಮುಗಿಲಂ ಮುಟ್ಟಿತ್ತು ಸೇನಾರಜದೊಡನೆ ಜಯೇಭ ಶ್ರೇಣಿ ದಿಗ್ಭಿ
ತ್ತಿಗಳಂ ಮುಟ್ಟಿತ್ತು ತೂರ್ಯಾರವದೊಡನೆ ಬಲಕ್ಷೋಭ
ಶಬ್ದಂಪಯೋರಾ
ಶಿಗಳಂ ಮುಟ್ಟಿತ್ತು ದಾನಪ್ಲವದೊಡನೆ ಪರಕ್ಷೋಣೀಪಾಲಂಗನಾದೃ
ಗ್ವಿಗಳದ್ಬಾಷ್ಪಾಂಬುಧಾರಾ ಪ್ರಸರಮೆನೆ ನೃಪಂ ದಿಗ್ವಿಯೋದ್ಯುಕ್ತನಾದಂ

ಸೇನೆಯು ಎಬ್ಬಿಸಿದ ಧೂಳಿಯೊಂದಿಗೆ ಆನೆಗಳ ಮೇಲಿನ ಧ್ವಜಗಳೂ ಮುಗಿಲನ್ನು ಮುಟ್ಟಿದುವಂತೆ. ವಾದ್ಯಧ್ವನಿಯೊಂದಿಗೆ ಸೈನ್ಯದ ಕಲಕಲಧ್ವನಿಯೂ ದಿಗಂತಗಳನ್ನು ಮುಟ್ಟಿತಂತೆ. ಮದೋನ್ಮತ್ತ ಆನೆಗಳಿಂದ ಹೊರಹೊಮ್ಮಿದ ದ್ರವದೊಂದಿಗೆ ವೈರಿನೃಪರ ಅಂಗನೆಯರ ಕಣ್ಣೀರಿನ ರಾಶಿಯೂ ಸಾಗರವನ್ನು ಮುಟ್ಟಿತ್ತಂತೆ.

ಕನ್ನಡ ಸಂಸ್ಕೃತ ವ್ಯಾಕರಣಗಳಲ್ಲಿ ಪರಿಣತಿಯುಳ್ಳ ರನ್ನ ಕವಿಯ ಭಾಷಾಪ್ರಭುತ್ವವು ಗಣನೀಯವಾಗಿದೆ. ಈ ಬಗೆಗೆ ಆತನು 'ವಚೋವಿಭವ' ಎಂಬ ಪದವನ್ನು ಬಳಸಿದ್ದಾನೆ. ರನ್ನನ ವಾಗ್ವೈಭವವನ್ನು ಆತನ ಕಾವ್ಯಗಳಲ್ಲಿ ನಾವು ವಿಪುಲವಾಗಿ ಕಾಣುತ್ತೇವೆ. ವೀರ,ಅದ್ಭುತ, ಶೋಕ, ಕರುಣೆ, ಶೃಂಗಾರ, ಶಾಂತರಸಗಳನ್ನು ಪ್ರತಿಪಾದಿಸಲು ರನ್ನನು ಸಮುಚಿತ ಪದಗಳನ್ನು ಬಳಸುತ್ತಾನೆ. ಗದಾಯುದ್ಧ, ಅಜಿತಪುರಾಣ ಕಾವ್ಯಗಳ ವ್ಯಾಸಂಗದಿಂದ ಈ ಮಾತು ಸ್ಪಷ್ಟವಾಗುವಂತಿದೆ. ಕೆಲವು ಉದಾಹರಣೆಗಳನ್ನು ಇಲ್ಲಿ ನೋಡಬಹುದು :

ಕೌರವರೊಡನೆ ಸಂಧಿ ನಡೆಯುವ ಸಂದರ್ಭವಿದೆಯೆಂದು ದ್ರೌಪದಿಗೆ ತಿಳಿಯಿತು. ಆಗ ಆಕೆಯು ಭೀಮಸೇನನ ಕಡೆಗೆ ಹೋಗಿ ಆತನಲ್ಲಿ ರೋಷ

ವನ್ನು ಉದ್ರೇಕಿಸಿ ಸಂಧಿ ನಡೆಯದಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾಳೆ. ದ್ರೌಪದಿಯು ಸಂಧಿಸಲಿರುವ ಭೀಮನ ಚಿತ್ರವಿದು :

ಗ, ಯು. I—55

ಖಳ ದುಶ್ಶಾಸನ ಕೃಷ್ಣಲೋಹಿತ ಜಲಾಶ್ಲಿಷ್ಟಂ, ಕುರುಪ್ರೋದ್ಭವ
ಪ್ರಳಯ ಜ್ವಾಲಿ ಸುಯೋಧನೋರು ಮಕುಟೋದ್ಘಟ್ಟ ಪ್ರತಿಜ್ಞಾಕ್ಷರಾ
ವಳಿವಿನ್ಯಸ್ತವಿಶಾಲ ನಿಶ್ಚಳ ಶಿಲಾಸ್ತಂಭಂ, ಕುರುಕ್ಷೇತ್ರದೊಳ್
ಪ್ರಳಯೋಗ್ರಾಂತಕನಂತುಗರ್ವನೊಳಕೊಂಡಿರ್ದಂ ಹಿಡಿಂಬಾಂತಕಂ

ಪ್ರಳಯಕಾಲದ ಉಗ್ರ ಅಂತಕನ ಭೀಕರತೆಯಿಂದ ಕೂಡಿದ ಭೀಮನು 'ನಿಶ್ಚಳ ಶಿಲಾಸ್ತಂಭ'ದಂತೆ ನಿಂತಿದ್ದನಂತೆ. ಭೀಮನ ಭೀಕರತೆಯನ್ನು ಬಣ್ಣಿಸುವ ಪರಿಣಾಮಕಾರಿಯಾಗಿರುವ ಇಲ್ಲಿಯ ಪದಪ್ರಯೋಗವನ್ನು ಗಮನಿಸಬೇಕು. ಈ ಸಂದರ್ಭದಲ್ಲಿ ಭೀಮನನ್ನು ಕುರಿತು ಹೇಳಿದ 'ಹಿಡಂಬಾಂತಕಂ' ಎಂಬ ಪ್ರಯೋಗದ ಔಚಿತ್ಯವನ್ನು ಮೆಚ್ಚಿಕೊಳ್ಳಬೇಕು. ಹಿಡಿಂಬ ರಾಕ್ಷಸನಿಗೂ ಯಮನಾಗಿ ಪರಿಣಮಿಸಿದ ಸನ್ನಿವೇಶವನ್ನು ಇಲ್ಲಿ ನೆನಪಿಗೆ ತಂದುಕೊಡಲಾಗಿದೆ. ಸಂದರ್ಭಕ್ಕೆ ಹೊಂದುವಂತೆ ಸಮಂಜಸ ಪದಗಳನ್ನು, ವಿಶೇಷಣಗಳನ್ನು, ರೂಪಕಗಳನ್ನು ಬಳಸುವದು ರನ್ನನ ಶೈಲಿಯ ವಿಶೇಷ ಗುಣವಾಗಿದೆ. ಮೇಲಿನ ಪದ್ಯದಲ್ಲಿ ಭೀಮನನ್ನು 'ಪ್ರಳಯೋಗ್ರಾಂತಕ' ಎಂದು ಹೇಳಲಾಗಿದೆ. ಬೇರೆ ಸಂದರ್ಭಗಳಲ್ಲಿ ಆತನನ್ನು "ಕುರುರಾಜಾರ್ಣವ ಬಾಡಬಾಗ್ನಿ", "ದುಶ್ಶಾಸನ ರಕ್ತರಕ್ತವದನಂ", "ಪಾಂಡವ ಬಲ ಪ್ರಾಕಾರ", "ಕೌರವ್ಯ ಕುಲ ಕಾಲಾನಲ", "ದುಶ್ಶಾಸನದನುಜ ವಿಶಾಲವಕ್ಷಸ್ಥಳಕೇಳೀ ನೃಸಿಂಹ", 'ಸಾಹಸಭೀಮ' ಎಂದು ಉಲ್ಲೇಖಿಸಲಾಗಿದೆ. ಆಯಾ ವಿಶೇಷಣಗಳು, ರೂಪಕಗಳು ಸಮುಚಿತ ವಾಗಿ ಅರ್ಥಪೂರ್ಣವಾಗಿ ಮೂಡಿಬಂದಿವೆ. ದುರ್ಯೋಧನನ ಬಗೆಗೆ "ಸಾಹಸಗರ್ವಾಲಂಕೃತ", "ಕುರುಕುಲ ಮೂಲಸ್ತಂಭ", "ಅಭಿಮಾನಧನ", "ಕುರುಕುಲಾರ್ಕ" ಎಂಬ ಪದಗಳು ಬಂದಿವೆ. ವೈರಿಯಾದ ಭೀಮನಿಗೆ ಆತನು 'ಭರತಕುಲೇಂದು ಕಲಂಕ'. 'ಕುರುಕೇತು' ಆದರೆ ತಾಯಿಯಾದ ಗಾಂಧಾರಿಗೆ 'ಕುರುನರೇಂದ್ರ', 'ಉರಗಪತಾಕ' ಆಗಿದ್ದಾನೆ. "ದ್ರೌಪದೀ ದ್ರೋಹ ದುಶ್ಶಾಸನ", "ದುಃಖಶತಜನನಿ ಗಾಂಧಾರಿ" ಎಂಬ ಪದಗಳನ್ನು ಬಳಸುವ ರನ್ನನ ಜಾಣ್ಮೆಯನ್ನು ನಾವು ಗಮನಿಸಬೇಕು. ಭೀಮನಲ್ಲಿ ರೋಷ

ವನ್ನು ಪ್ರಚೋದಿಸಿ ಸಂಧಿಯನ್ನು ತಪ್ಪಿಸಿದ ದ್ರೌಪದಿಯು "ಎರಡನೆಯ ಹಿಡಿಂಬಿನಿ." ಅವಳ ಕೇಶಪಾಶವು 'ಕುರುಕುಲ ಜೀವಾಕರ್ಷಣಮಿದು ಕಾಳ ಹಸ್ತಂ', ಕರ್ಣನ ಉದಾತ್ತಗುಣಗಳನ್ನು ಸ್ಮರಿಸುವ ದುರ್ಯೋಧನನಿಗೆ ಆತನು 'ರವಿನಂದನ'. ಆತನ ರೂಪವನ್ನು ಚಿತ್ರಿಸುವಾಗ ಕರ್ಣ 'ದಿನೇಶ್ವರ ಸುತ'. ಕಾಂತಿಯುಕ್ತನಾದ ದಿನಪತಿಯ ಉಲ್ಲೇಖದೊಂದಿಗೆ ಕರ್ಣನ ಗಂಭೀರ, ಪ್ರಸನ್ನ ಮುಖಮುದ್ರೆಯನ್ನು ನಿರ್ದೇಶಿಸಲಾಗಿದೆ. ಇಲ್ಲಿ ರನ್ನನ ಪದಪ್ರಯೋಗದ ಕುಶಲತೆಯು ಸ್ಪಷ್ಟವಾಗಿದೆ.

ಕೌರವರೊಂದಿಗೆ ಸಂಧಿ ನಡೆಯಕೂಡದು, ಎಂದು ದ್ರೌಪದಿಯು ಭೀಮನಿಗೆ ಹೇಳಿದಾಗ ಆತನು ಪ್ರತಿಯಾಗಿ ಹೇಳುವ ಮಾತುಗಳಿವು :

ಗ. ಯು. I—66

ನೀನಗ್ನಿ ಪುತ್ರಿಯೈ ಪವ
ಮಾನ ತನೂಭವನೆನಾನಣಂ ಕೂಡೆ ಸುಸಂ
ಧಾನಮರಿ ನೃಪರೊಳೆಂತನ
ಲಾನಿಲ ಸಂಯೋಗಮುರಿಪದಿರ್ಕುಮೆ ಪಗೆಯಂ,

ನೀನು ಬೆಂಕಿಯ ಮಗಳು. ನಾನು ಗಾಳಿಯ ಮಗ. ಬೆಂಕಿ-ಗಾಳಿ ಕೂಡಿದಾಗ ವೈರಿ ಸುಟ್ಟುಹೋಗಲೇಬೇಕು.) ಸಂಧಿಯು ಅಸಾಧ್ಯವೆಂಬ ದೃಷ್ಟಾಂತವಿಲ್ಲಿದೆ. ವೀರರಸವನ್ನು ಪ್ರಚೋದಿಸುವ ಪದಪ್ರಯೋಗವಿದೆ. ಜ್ವಲಂತ ರೋಷವನ್ನು ಹೊರಹೊಮ್ಮಿಸುವ ಭೀಮನ ವಾಣಿಯನ್ನು ಕೇಳಬೇಕು :

ಗ. ಯು. I—73.

ದಂಡಿತ ವೈರಿಬಲಲೋಹಿತ ಬಂಧುರ ದಂಡಮೀ ಭುಜಾ
ದಂಡಮುಮಾಜಿ ಭೀಕರ ವಿರೋಧಿ ವಿದಾರಣದಂಡಮೀ ಗದಾ
ದಂಡಮುಮುಗ್ರ ಪನ್ನಗ ವಿಭೀಷಣಮಾಹವ ಶೌಂಡಮೀ ಧನು
ರ್ದಂಡಮುಮುಳ್ಳಿನಂ ದ್ರುಪದನಂದನೆ ಸಂಧಿಯನಾಗಲೀವೆನೇ ?

ಈ ರೋಷದ ಚಿತ್ರದೊಂದಿಗೆ ಕರುಣೆಯ ಚಿತ್ರವೊಂದನ್ನು ಹೋಲಿಸಿ ನೋಡಬೇಕು. ಅಜಿತನಾಥ ವಿರಕ್ತನಾಗಿ ಸ್ವರ್ಗಕ್ಕೆ ತೆರಳಿದಾಗ ಅಂತಃಪುರದ ಸ್ತ್ರೀಯರು ವಿಲಾಪಗೈಯ್ಯುತ್ತಿದ್ದಾರೆ. ಆ ಸನ್ನಿವೇಶದ ಒಂದು ಪದ್ಯವಿದು :

ಅ. ಪು. VI—120.

ಬಡವರ ನಂಟನಾವೆಡೆ, ದಯಾಪರನಾವೆಡೆ ಧರ್ಮಚಿತ್ತನಾ
ವೆಡೆ ಶುಭಚಿತ್ತನಾವೆಡೆ ಮಹೋದಯನಾವೆಡೆ ಪುಣ್ಯಭಾಜನಾ
ವೆಡೆ ಜನನಾಥನಾವೆಡೆ ಶುಭಾಕರನಾವೆಡೆ ಸತ್ಯವಾಕ್ಯನಾ
ವೆಡೆ ಗುಣಸಿಂಧುವಾವೆಡೆ ಮನೋರಮನಾವೆಡೆ ಪೇಳಲಾಗದೇ

ಮೇಲ್ಕಂಡ ಎರಡು ಪದ್ಯಗಳಲ್ಲಿಯ ಸನ್ನಿವೇಶ, ಚಿತ್ರಣಗಳು ಬೇರೆ ಬೇರೆಯಾಗಿವೆ. ಅವಕ್ಕನುಗುಣವಾಗುವಂತಹ ಪದಪ್ರಯೋಗವೂ ಭಿನ್ನವಾಗಿದ್ದು ರನ್ನನ 'ಪದಸಮಂಜಸತ್ವವು' ಒಡೆದು ಕಾಣುವಂತಿದೆ. ಆಯಾ ರಸಕ್ಕೆ ಉಚಿತವಾಗುವ ಪದಪ್ರಯೋಗ ಅಲ್ಲಲ್ಲಿ ಕಂಡು ಬರುತ್ತದೆ. ಗದಾಯುದ್ಧ ಕಾವ್ಯದಲ್ಲಿ ಕೊನೆಯವರೆಗೂ ಛಲವನ್ನು ಸಾಧಿಸಿದ ದುರ್ಯೋಧನನಿಗೆ ಭೀಷ್ಮನು ಸಂಧಿಯ ಸಲಹೆಯನ್ನು ಮಾಡಿದಾಗ ಹೊರಹೊಮ್ಮಿದ ನುಡಿಗಡಣವನ್ನು ಆಲಿಸಬೇಕು :

ಗ. ಯು. V-46.

ಕಲಿಗಂ ಶಂಕೆಯೆ, ಚಾಗಿಗಂ ಬೆರಗೆ, ಮೇಣ್ ಕಟ್ಟಾಳ್ಗೆರಂಪಾರ್ವನೆ,
ಕುಲಜಂಗಂ ಮಱುವಾಳೆ, ಸಜ್ಜನಿಕೆಗಂ ಕಲ್ಪೋಜೆಯೆ, ಧರ್ಮಿಗಂ
ಕೊಲೆಯೇ, ಮಂತ್ರಿಗಮಿಚ್ಚಕಾಱತನಮೇತಕ್ಕಂ ಪಿಸುಣ್ಪೇಟ್ಟನೇ
ಚಲಮಂ ಗಂಡುಮನಪ್ಪುಕೆಯ್ವೆನಗಮಾ ಕೌಂತೇಯರೋಳ್ ಸಂಧಿಯೆ

ಮಾತು 'ಅಳ್ಳು ಹುರಿದಂತೆ' ಎಂಬುದು ಜನಪದವಾಣಿಯಲ್ಲಿ ಬರುತ್ತದೆ. ಅರಳು ಹುರಿದಂತೆ ದುರ್ಯೋಧನನ ನುಡಿಗಳು ಇಲ್ಲಿ ಸಿಡಿದು ಬರುತ್ತಿವೆ. ಛಲ, ಶೌರ್ಯಗಳುಳ್ಳ ದುರ್ಯೋಧನನು ಸಂಧಿಗೆ ಒಡಂಬಡುವುದು ಸಾಧ್ಯವಿಲ್ಲವೆಂಬ ಅಭಿಪ್ರಾಯ ಇಲ್ಲಿ ಅತ್ಯಂತ ಸ್ಫುಟವಾಗಿ ಮೂಡಿಬಂದಿದೆ.

ಗ. ಯು. V-47.

ನೆಲಕಿಱಿವನೆಂದು ಬಗೆದಿರೆ
ಚಲಕಿಱಿವೆಂ ಪಾಂಡುಸುತರೊಳೀ ನೆಲನಿದು ಪಾ
ಟ್ಟಿಲನೆನಗೆ ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ದಪನೆ

ಎಂದು ದುರ್ಯೋಧನನು ಹೇಳುವ ಮಾತುಗಳು ಶಕ್ತಿಪೂರ್ಣವಾಗಿವೆ. ದುರ್ಯೋಧನನು ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತಾಗ ಭೀಮನ ಕೋಪಾಗ್ನಿಗೆ ಆಹುತಿಯಾದ ಸರೋವರದ ಚಿತ್ರಣದಲ್ಲಿ ಎಂತಹ ಶಕ್ತಿಪೂರ್ಣ ಶೈಲಿಯಿದೆಯೆಂಬುದನ್ನು ಗಮನಿಸಬೇಕು:

ಗ. ಯು. VII-21.

ಅಳುರ್ದು ಕೊಳೆ ಭೀಮ ಕೋಪಾ
ನಳನೆಸವೊಯ್ದಿಟ್ಟ ಜಲದವೊಲ್ಮುಟುಗಿದುದಾ
ಕೊಳದ ಜಲಮೆಯ್ದೆ ಕಾಯ್ದುಸ
ರೊಳೆ ಕೊಟ್ಕುದಿವಂತೆ ಕುದಿದವನಿಮಿಷ ತತಿಗಳ್

ಭೀಮನ ಸಿಂಹನಾದದ ಪರಿಣಾಮವನ್ನು ನೋಡಬೇಕು:

ಗ. ಯು. VII-22.

ಆ ರವಮಂ ನಿರ್ಜಿತ ಕಂ
ಠೀರವ ರವಮಂ ನಿರಸ್ತಘನರವಮಂ ಕೋ
ಪಾರುಣ ನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ

ಭೀಮನ ಧ್ವನಿಯು ಕಂಠೀರವದ ರವದಂತೆ. ಅದನ್ನು ಕೇಳಿ ನೀರೊಳಗಿದ್ದೂ ಉರಗಪತಾಕ ಬೆಮರ್ತನಂತೆ. ಕೋಪೋದ್ರಿಕ್ತನಾದ ದುರ್ಯೋಧನನು ಸರೋವರದ ಕೆಳಭಾಗದಿಂದ ಮೇಲಕ್ಕೆ ನೆಗೆದುದನ್ನು ರನ್ನನು ಉಜ್ವಲವಾಗಿ ಚಿತ್ರಿಸಿದ್ದಾನೆ:

ಗ. ಯು. VII-30

ರಸೆಯಿಂ ಕಾಲಾಗ್ನಿ ರುದ್ರಂ ಪೊಱಮಡುವವೊಲಂತಾ
ಸರೋವರ ಮಧ್ಯದಿಂ ಸಾ
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟೆಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತ ನಿಟಿಲಾ ಲೋಲ ಕೀಲಾಕ್ಷಿವೊಲ್ ದ
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ

ಸಾಹಸಗರ್ವಾಲಂಕೃತನಾದ ದುರ್ಯೋಧನನ ಚಿತ್ರಣಕ್ಕನುಗುಣವಾದ ಪದ-ಪುಂಜವಿಲ್ಲಿದೆ. ಇದೇ ದುರ್ಯೋಧನನು ರಣಾಂಗಣದಲ್ಲಿ ತನ್ನ ಅನುಜ, ಸ್ನೇಹಿತರ ಶವಗಳನ್ನು ಕಂಡು ಮಾಡುವ ವಿಳಾಪದ ಚಿತ್ರಣ ಹೃದಯಸ್ಪರ್ಶಿ-ಯಾಗಿದೆ.

ಗ. ಯು. III-69

ಎನಗೆ ಮನಮಿಂದು ಶೂನ್ಯಂ
ಮನೆ ಶೂನ್ಯಂ ಬೀಡು ಶೂನ್ಯವಾದುದು ಸಕಲಾ
ವನಿ ಶೂನ್ಯಮಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ

ಗ. ಯು. V-30

ಆರೊಡನೆ ನುಡಿವೆನಟ್ಟಿಯೊ
ಳಾರೊಡನೋಲಗದೊಳಿರ್ಪೆನಾರೊಡನೆ ಸಮಂ
ತಾರೋಗಿಪೆನೇಱುವೆನಾ
ನಾರೊಡನೆನ್ನಣುಗರಿಲ್ಲದಿಭವಾಜಿಗಳಂ

ಎಂದು ಹಂಬಲಿಸುವ ದುರ್ಯೋಧನನನ್ನು ಕಂಡಾಗ ನಮ್ಮ ಹೃದಯವು ಮಲ್ಮಲನೆ ಮರುಗುತ್ತದೆ. ಬಗೆಬಗೆಯ ಭಾವಗಳನ್ನು, ಚಿತ್ರಗಳನ್ನು ಸಮ-ಯೋಚಿತ ಪದಪ್ರಯೋಗದಿಂದ ಹೊರಹೊಮ್ಮಿಸುವಲ್ಲಿ ರನ್ನನ ಕುಶಲತೆಯು ಹಿರಿದಾಗಿದೆ.

ಸ್ತ್ರೀಯರ ಕಣ್ಣು, ಹುಬ್ಬುಗಳನ್ನು ವರ್ಣಿಸುವದು ನಮ್ಮ ಪ್ರಾಚೀನ ಕವಿಗಳ ಸಾಂಪ್ರದಾಯವೇ ಆಗಿದೆ. ಶೃಂಗಾರರಸಕ್ಕೆ ಪೋಷಕವಾಗುವಂತೆ ರನ್ನನು ವಿಜಯಸೇನಾದೇವಿಯನ್ನು ಬಣ್ಣಿಸಿದ ಬಗೆಯಿದು :

ಅ. ಪು. III-13

ಮಸೆದ ಮದನ ಬಾಣಾಟೋಪಮಂ ಕಣ್ಣ ಬೆಳ್ಪೇ
ಱಿಸಿದ ಮದನ ಚಾಪಾಟೋಪಮಂ ಪುರ್ಬುಗಳ್ಪೋ
ಲ್ತೆಸೆಯೆ ವಿಜಯಚಿಹ್ನಂ ಚಿತ್ತಜಂಗೆಂಬಿನಂ ರಂ
ಜಿಸುವ ವಿಜಯಸೇನಾದೇವಿ ಕಣ್ಗೊಪ್ಪಿ ಬಂದಳ್

ಮದನನ ಬಾಣಾಟೋಪದಂತೆ ಚಾಪಾಟೋಪದಂತೆ ವಿಜಯಸೇನಾದೇವಿಯ ಕಣ್ಣು ಹುಬ್ಬುಗಳಿದ್ದವು. ಆದುದರಿಂದ ವಿಜಯಸೇನಾದೇವಿಯು ಮನ್ಮಥನ ವಿಜಯ ಚಿಹ್ನವಾಗಿದ್ದಳಂತೆ. ಇಲ್ಲಿಯ ಪದಪ್ರಯೋಗದಲ್ಲಿ ಮತ್ತು ಶೃಂಗಾರ ರಸಪ್ರತಿಪಾದನೆಯಲ್ಲಿ ರನ್ನನ ಜಾಣ್ಮೆ ಕಂಡುಬರುತ್ತಿದೆ.

ಇನ್ನು ಅಜಿತತೀರ್ಥೇಶ್ವರನ ಚಿತ್ರವನ್ನು ನೋಡಬೇಕು :

ಅ. ಪು. VII-5

ಅನಿಲನವೋಲ್ ನಿಸ್ಸಂಗಂ
ಕನಕಮಹಾದ್ರೀಂದ್ರದಂದದಿಂ ನಿಷ್ಕಂಪಂ
ವನನಿಧಿಯಂತಕ್ಷೋಭಂ
ಘನಮಾರ್ಗದವೋಲ್ ಮುನೀಶ್ವರಂ ನಿಂದಿರ್ದಂ

ಗಾಳಿಯಂತೆ ನಿಸ್ಸಂಗ, ಕನಕಮಹಾಪರ್ವತದಂತೆ ನಿಷ್ಕಂಪ, ಶಾಂತಸಾಗರ ದಂತೆ ಅಕ್ಷೋಭ, ಘನಮಾರ್ಗದಂತೆ ಗಂಭೀರವಾಗಿ ಮುನೀಶ್ವರ ನಿಂತಿ-ದ್ದನಂತೆ.

ಶಾಂತರಸವನ್ನು ಪ್ರತಿಪಾದಿಸುವ ರನ್ನನ ಮಾತುಗಳನ್ನಷ್ಟು ಕೇಳೋಣ :

ಅ. ಪು. VII-6

ಕರಿಕಲಭಂಗಳ್ ಕರಿ ಕೇ
ಸರಿಗಳ್ ವೈರಮನೆ ಬಗೆಯದಹಿ ನಕುಲಂಗಳ್
ಹರಿಣ ಚಮೂರಂಗಳ್ ಶಾಂ
ತರೂಪದಿಂದಿರ್ದುವಜಿತನಾಥನ ಕೆಲದೊಳ್

ಅ. ಪು. VII-7

ವನಮೂಷಕ ಮಾರ್ಜಾಲಂ
ವನಾಶ್ವ ಮಹಿಷ ವನಾಶ್ವ ಸೂಕರಮನಿತುಂ
ಮುನಿಸಂ ಪರಿಹರಿಸಿರ್ದುವು
ಮುನಿನಾಥಾಂತಿಕದೊಳುದಿತ ಶಾಂತರಸಂಗಳ್

ಭೀಮ-ದುರ್ಯೋಧನರ ಕೋಪೋದ್ರೇಕವನ್ನು ಬಣ್ಣಿಸಿದ ಕವಿಯು ನಿಸರ್ಗ ವೈರವುಳ್ಳ ಕಾಡಿನ ಪ್ರಾಣಿಗಳೆಲ್ಲ ಅಜಿತನಾಥನ ಸಾನ್ನಿಧ್ಯದಲ್ಲಿ ಮುನಿಸಂ ಪರಿಹರಿಸಿ ಶಾಂತರೂಪದಿಂದ ಇದ್ದುದನ್ನು ಸಹಜಸುಂದರವಾಗಿ ಚಿತ್ರಿಸಿದ್ದಾನೆ.

ಅರ್ಥಪುಷ್ಟಿ, ಗಾಂಭೀರ್ಯ, ಶಕ್ತಿ, ಲಾಲಿತ್ಯ, ಪದಮೈತ್ರಿ ಅಲಂಕಾರದ ಸಹಜತೆಗಳೇ ರನ್ನನ ಕಾವ್ಯಶೈಲಿಯಲ್ಲಿ ಕಂಡುಬರುತ್ತವೆ. ಇನ್ನೆರಡು ಉದಾಹರಣೆಗಳೊಂದಿಗೆ ಈ ಅವಲೋಕನವನ್ನು ಮುಗಿಸಬಹುದು. ಲಾಕ್ಷಣಿಕರ ಮೆಚ್ಚುಗೆಗೆ ಪಾತ್ರವಾದ ಪದ್ಯವಿದು :

ಅ. ಪು. VI-23.

ಎಳಿವೆಱದಾಡೆ ಕೆಂದಳಿರೆ ನಾಲಗೆ ಮಾಮರನಳ್ಳಿಗೊಂಬಿನೊಳ್
ಮಿಳಿರ್ವೆಳವಳ್ಳಿ ಬಾಲಮಲರ್ಗೊಂಚಲೆ ಕೇಸರಮೆಂಬಿನಂ ಮನಂ
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುತ್ಕಕೀಗಮದ ಕೋಕಿಲ ಗರ್ಜಿತ ತರ್ಜಿತಂಗಳಿಂ

ಇಲ್ಲಿ ಮಧುಮಾಸವನ್ನು ಕೇಸರಿಯೆಂದು ರೂಪಕಾಲಂಕಾರದಿಂದ ಬಣ್ಣಿಸುವ ಕವಿತಾಚಾತುರ್ಯವಿದೆ. ಈ ಸಿಂಹವು ವಿಯೋಗಿಗಳೆಂಬ ಮೃಗಗಳಿಗೆ ಭಯವನ್ನುಂಟುಮಾಡಿತೆಂದು ಸಹಜ ಸುಂದರವಾಗಿ ನಿರೂಪಿಸಲಾಗಿದೆ. ಇಲ್ಲಿಯ ಪದಗಳ ಲಾಲಿತ್ಯವು ಶ್ರುತರಮಣೀಯವಾಗಿದೆ.

ಮಹಾನುಭಾವ ದುರ್ಯೋಧನನ ಅಂತವನ್ನು ಸೂರ್ಯಾಸ್ತದೊಂದಿಗೆ ಚಿತ್ರಿಸಿದ ಗದಾಯುದ್ಧದ ಪದ್ಯದಲ್ಲಿ ಭಾವದ ಗಾಂಭೀರ್ಯ, ಭಾಷೆಯ ಶಕ್ತಿ, ಕಲ್ಪಕತೆಯ ರಮಣೀಯತೆ ಇವು ಮೇಳವಿಸಿಬಂದಿವೆ.

ಗ. ಯು. XI-39.

ಪಂಕಜಮುಂ ಸುಹೃದ್ವದನ ಪಂಕಜಮುಂ ಮುಗಿವನ್ನಮುಗ್ರ ತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ದು ಚ
ಕ್ರಾಂಕಮಗಲ್ವಿನಂ ಕ್ರಮದಿನಂಬರಮಂ ಬಿಸುಟುರ್ಬಿನಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್

ರನ್ನ ಚಿತ್ರಿಸಿದ ದುರ್ಯೋಧನ ಉಜ್ವಲ. ರನ್ನನ ಶೈಲಿಯೂ ಉಜ್ವಲ.

## ಈ ಮಾಲೆಯ ಪುಸ್ತಕಗಳು

೧. ನಿಜಗುಣ ಶಿವಯೋಗಿ ಹಾಗೂ ಅವರ ಕೃತಿಗಳು — ೦.೫೦

೨. ಮಹಾಕವಿ ರನ್ನ ಹಾಗು ಅವನ ಕೃತಿಗಳು — ೧.೦೦

೩. ಮಹಾಕವಿ ಪಂಪ ಹಾಗೂ ಅವನ ಕೃತಿಗಳು — ೧.೦೦

೪. ಸರ್ವಜ್ಞಕವಿ : ಜೀವನ ಹಾಗು ಕಾವ್ಯ — ೧.೫೦

೫. ಬಸವಣ್ಣನವರ ವ್ಯಕ್ತಿತ್ವ ಹಾಗು ಜೀವನಸಿದ್ಧಿ — ೧.೫೦

೬. ಸಾಹಿತ್ಯ ವಿಮರ್ಶೆ — ೧.೫೦

---

ವ್ಯಾಸಂಗ ವಿಸ್ತರಣ ಹಾಗು ಪ್ರಕಟನ ಶಾಖೆ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ